ರಜತಮಹೋತ್ಸವದ ಪ್ರಕಟನೆ
ಉಪನ್ಯಾಸ ಗ್ರಂಥಮಾಲೆ
೧೩೭

# ಕನ್ನಡ ಕಾವ್ಯಗಳಲ್ಲಿ ನಾಟಕೀಯತೆ

ಪ್ರೊ. ಎಸ್. ಬಿ. ತೋಟದ
ಎಂ. ಎ., ಬಿ. ಎಡ್.




ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ
ಅಕ್ಟೋಬರ, ೧೯೭೬

ಪ್ರಕಾಶಕರು :
ಸಿ. ಎಸ್. ಕಣವಿ
ನಿರ್ದೇಶಕರು,
ವ್ಯಾಸಂಗವಿಸ್ತರಣ-ಪ್ರಕಟನ ವಿಭಾಗ
ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ

ಪ್ರಥಮ ಮುದ್ರಣ: ೫೦೦೦ ಪ್ರತಿಗಳು
ಅಕ್ಟೋಬರ, ೧೯೭೬



ಬೆಲೆ: ೨೫ ಪೈಸೆ

ಮುದ್ರಕರು :
ಕರ್ನಾಟಕ ವಿಶ್ವವಿದ್ಯಾಲಯ ಮುದ್ರಣಾಲಯ
ಧಾರವಾಡ-೫೮೦ ೦೦೩

# ಮುನ್ನುಡಿ

ಕರ್ನಾಟಕ ವಿಶ್ವವಿದ್ಯಾಲಯವು ತನ್ನ ವ್ಯಾಸಂಗ ವಿಸ್ತರಣ ಹಾಗೂ ಪ್ರಕಟನ ಶಾಖೆಯ ಮುಖಾಂತರ ಕೈ-ಕೊಂಡು ನಡೆಸುತ್ತಿರುವ ಜ್ಞಾನಪ್ರಸಾರದ ಯೋಜನೆಗಳಲ್ಲಿ ಈ 'ಉಪನ್ಯಾಸ ಗ್ರಂಥಮಾಲೆ' ಅತ್ಯಂತ ಮುಖ್ಯವೂ, ಜನ ಪ್ರಿಯವೂ ಆಗಿರುವುದು ಹೆಮ್ಮೆಯ ಮಾತಾಗಿದೆ. ವಿಶ್ವ-ವಿದ್ಯಾಲಯದ ಆಡಳಿತ ಕ್ಷೇತ್ರದಲ್ಲಿರುವ ಎಂಟು ಜಿಲ್ಲೆಗಳಲ್ಲಿಯೂ ಉಪನ್ಯಾಸ ಶಿಬಿರಗಳನ್ನು ಏರ್ಪಡಿಸಲಾಗುತ್ತಿದ್ದು, ವಿಶ್ವವಿದ್ಯಾಲಯದ ಮತ್ತು ಇದಕ್ಕೆ ಸೇರಿದ ಕಾಲೇಜುಗಳ ಪ್ರಾಧ್ಯಾಪಕರು ಸಾಹಿತ್ಯ, ವಿಜ್ಞಾನ, ಸಾಮಾಜಿಕ ಶಾಸ್ತ್ರ ಮೊದಲಾದ ಶಾಖೆಗಳಿಗೆ ಸಂಬಂಧಪಟ್ಟ ವಿಷಯಗಳನ್ನು ಆಯ್ದುಕೊಂಡು, ಶಾಸ್ತ್ರಸಮ್ಮತವಾದ ಸರಣಿಯಲ್ಲಿ, ಜನ ಸಾಮಾನ್ಯರಿಗೆ ತಿಳಿಯುವ ಶೈಲಿಯಲ್ಲಿ ಈ ಶಿಬಿರಗಳಲ್ಲಿ ಉಪನ್ಯಾಸಗಳನ್ನು ಕೊಡುತ್ತಾರೆ. ವಿಶ್ವವಿದ್ಯಾಲಯದ ಜ್ಞಾನ ಭಾಂಡಾರದ ಅಲ್ಪಾಂಶವನ್ನಾದರೂ ಮಹಾ ಜನರ ಮನೆಬಾಗಿಲಿಗೆ ಒಯ್ದು ಮುಟ್ಟಿಸಬೇಕೆಂದು ಮಾಡಿದ ಈ ಪ್ರಯತ್ನಕ್ಕೆ ನಮ್ಮ ನಿರೀಕ್ಷೆಗೆ ಮೀರಿದ ಮೆಚ್ಚಿಕೆಯೂ, ಪ್ರೋತ್ಸಾಹವೂ ದೊರೆಯುತ್ತಿವೆ. ಜನರು ತಾವಾಗಿಯೇ ಮುಂದೆ ಬಂದು ತಮ್ಮ ತಮ್ಮ ಊರುಗಳಲ್ಲಿ ಈ ಉಪನ್ಯಾಸ ಮಾಲೆಗಳನ್ನು ಏರ್ಪಡಿಸಲು ವಿಶ್ವವಿದ್ಯಾಲಯಕ್ಕೆ ಬರೆದು ಬಿನ್ನವಿಸಿಕೊಳ್ಳುತ್ತಿರುವುದು ನಿಜವಾಗಿಯೂ ಸಂತೋಷದ ಸಂಗತಿಯಾಗಿದೆ

ಈ ಜ್ಞಾನ ಪ್ರಸಾರಕಾರ್ಯದಲ್ಲಿ ಭಾಗವಹಿಸುವದರಿಂದ ವಿಶ್ವವಿದ್ಯಾಲಯದ ಹಾಗೂ ಕಾಲೇಜುಗಳ ಅಧ್ಯಾಪಕರಿಗೆ ಆಯಾ ಪ್ರದೇಶದ ಜನತೆಯೊಡನೆ ಹೆಚ್ಚಿನ ಸಂಪರ್ಕ ಒದಗುವದಲ್ಲದೆ ಎಂತಹ ವಿಷಯವನ್ನಾದರೂ ಕನ್ನಡದಲ್ಲಿ ತಿಳಿಸಿ ಹೇಳುವ ಹಾಗೂ ಅದನ್ನು ಸುಲಭ ಶೈಲಿಯಲ್ಲಿ ಬರವಣಿಗೆಯಲ್ಲಿಳಿಸುವ ಅವಕಾಶ ದೊರೆಯುತ್ತದೆ. ಈ ಕಾರ್ಯದಲ್ಲಿ ಅವರೆಲ್ಲರೂ ಮನಮುಟ್ಟಿ ಸಹಕರಿಸುತ್ತಿರುವುದು ಶ್ಲಾಘನೀಯ.

ಈ ಮಾಲೆಯಲ್ಲಿ ಈಗಾಗಲೇ ೨೩೬ ಪುಸ್ತಕಗಳು ಪ್ರಕಟವಾಗಿವೆ. ಅವು ಅಚ್ಚಾಗಿ ಹೊರಬಂದೊಡನೆ ಅವುಗಳ ಸಾವಿರಾರು ಪ್ರತಿಗಳನ್ನು ಜನರು ಕೊಂಡು ಓದುತ್ತಾರೆ. ಅನೇಕ ಪುಸ್ತಕಗಳು ನಾಲ್ಕು-ಐದು ಮುದ್ರಣಗಳನ್ನು ಕಂಡಿರುವುದು ಈ ಮಾಲೆಯ ಉಪಯುಕ್ತತೆಯನ್ನೂ, ಜನ ಪ್ರಿಯತೆಯನ್ನೂ ವ್ಯಕ್ತಗೊಳಿಸುತ್ತದೆ. ಇದು ನಾಡಿನ ಪ್ರಗತಿಯ ಚಿಹ್ನೆಯೆಂದು ಭಾವಿಸುತ್ತೇನೆ.

ವಿಶ್ವವಿದ್ಯಾಲಯದ ಈ ಸೇವೆಯ ಸಂಪೂರ್ಣ ಪ್ರಯೋಜನ ಪಡೆದು ಸಾಮಾನ್ಯ ಜನತೆ ನಾಡಿನ ಸರ್ವತೋಮುಖ ಪ್ರಗತಿಯಲ್ಲಿ ಪಾಲುಗೊಳ್ಳಲೆಂದು ಹಾರೈಸುತ್ತೇನೆ.

ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ

ಆರ್. ಸಿ. ಹಿರೇಮಠ
ಕುಲಪತಿಗಳು

# ಅರಿಕೆ

'ಕನ್ನಡ ಕಾವ್ಯಗಳಲ್ಲಿ ನಾಟಕೀಯತೆ' ಎಂಬ ವಿಷಯದ ಮೇಲೆ ಕರ್ನಾಟಕ ವಿಶ್ವವಿದ್ಯಾನಿಲಯದ ಪ್ರಸಾರೋಪನ್ಯಾಸ ಮಾಲೆಯು ಕಲ್ಲೊಳ್ಳಿ (ತಾ. ಗೋಕಾವಿ, ಜಿ. ಬೆಳಗಾವಿ) ಉಪನ್ಯಾಸ ಶಿಬಿರ (ದಿ ೬--೯-೧೯೭೫)ದಲ್ಲಿ ನನಗೆ ಭಾಷಣ ಮಾಡುವ ಸುಯೋಗ ಒದಗಿತ್ತು. ಅದನ್ನು ವಿಶ್ವವಿದ್ಯಾಲಯದ ಉಪನ್ಯಾಸ ಗ್ರಂಥ ಮಾಲೆಯಲ್ಲಿ ಪ್ರಕಟಿಸುವ ನಿರ್ಧಾರ ಕೈಕೊಂಡ ಮೇಲೆ, ಅದೇ ವಿಷಯವನ್ನು ವಿಸ್ತರಿಸಿ ಪ್ರಬಂಧಸ್ವರೂಪಕ್ಕೆ ಪರಿವರ್ತಿಸಿ ಈ ಚಿಕ್ಕ ಹೊತ್ತಿಗೆಯನ್ನು ಸಿದ್ಧಗೊಳಿಸಿರುವೆ. ಇದರಲ್ಲಿ ಕೇವಲ ೫ ಜನರ ಪ್ರತಿಭಾನ್ವಿತ ಕಾವ್ಯಗಳನ್ನು ಕುರಿತು ನಾಟಕೀಯತೆಯನ್ನು ಚರ್ಚಿಸಿರುವೆ. ಅದರಲ್ಲಿ ಮುಖ್ಯವಾಗಿ ರನ್ನನ 'ಗದಾಯುದ್ಧ' ರಾಘವಾಂಕನ 'ಹರಿಶ್ಚಂದ್ರ ಕಾವ್ಯ'ಗಳಲ್ಲಿ ಬರುವ ನಾಟಕೀಯತೆಯನ್ನು ಸ್ವಲ್ಪ ವಿಸ್ತಾರವಾಗಿ ಪ್ರತಿಪಾದಿಸಿ, ವಿಕ್ರಮಾರ್ಜುನವಿಜಯ,'ಕುಮಾರವ್ಯಾಸ ಭಾರತ'ಲಕ್ಷ್ಮೀಶನ ಜೈಮಿನಿ ಭಾರತಗಳಲ್ಲಿ ಒಂದೊಂದು ಸನ್ನಿವೇಶವನ್ನು ಕುರಿತು ವಿವೇಚಿಸಿರುವೆ. ಎಲ್ಲ ಕಾವ್ಯಗಳಲ್ಲಿಯ ನಾಟಕೀಯತೆಯನ್ನು ಪ್ರತಿಪಾದಿಸುವುದು ಈ ಕಿರುಹೊತ್ತಿಗೆಯಲ್ಲಿ ಸಾಧ್ಯವಿಲ್ಲವಾದುದರಿಂದ ಈ ವಿಶಾಲವಾದ ವಿಷಯವನ್ನು ಇಷ್ಟಕ್ಕೆ ಸೀಮಿತಗೊಳಿಸಿರುವೆನಾದುದರಿಂದ ವಾಚಕ ಮಹಾನುಭಾವರು ಕ್ಷಮಿಸಬೇಕು. ನಾಟಕೀಯತೆಯನ್ನು ಸ್ಥೂಲರೂಪವಾಗಿಯಾದರೂ ವಿಷಯದಲ್ಲಿ ಸಮಗ್ರತೆಯನ್ನು ಪಡೆಯಲು ಯತ್ನಿಸಿದಾಗ್ಯೂ ಎಲ್ಲ ಕಾವ್ಯಗಳ ವಿಷಯವನ್ನು ಅಳವಡಿಸಿಕೊಳ್ಳುವುದು ಸಾಧ್ಯವಾಗಲಿಲ್ಲ.

ಅನೇಕ ವಿದ್ವಾಂಸರ ವಿಚಾರಗಳನ್ನು ಈ ಗ್ರಂಥದಲ್ಲಿ ಬಳಸಿಕೊಳ್ಳಲಾಗಿದೆ. ಅವರೆಲ್ಲರಿಲ್ಲಗೂ ನಾನು ಕೃತಜ್ಞನಾಗಿರುವೆ.

ಕರ್ನಾಟಕ ವಿಶ್ವವಿದ್ಯಾಲಯದ ವ್ಯಾಸಂಗವಿಸ್ತರಣ ಸಮಿತಿಯ ಅಧಿಕಾರಿಗಳು ಹಾಗೂ ಮಾನ್ಯ ಕುಲಸಚಿವರು ನನ್ನ ಉಪನ್ಯಾಸಕ್ಕೆ ಅನುವುಮಾಡಿಕೊಟ್ಟು ಕೊನೆಗೆ ಈ ಕಿರು ಹೊತ್ತಿಗೆಯ ಪ್ರಕಟನೆಯ ಹೊಣೆ ಹೊತ್ತು ನಾಟ್ಯದ ಬಗೆಗೆ ನನ್ನ ವಿಚಾರಗಳನ್ನು ಪ್ರಚಾರ ಮಾಡುವುದಕ್ಕೆ ತುಂಬಾ ಸಹಾಯ ನೀಡಿದುದರಿಂದ ಅವರೆಲ್ಲರಿಗೂ ನನ್ನ ಹೃತ್ಪೂರ್ವಕ ವಂದನೆಗಳನ್ನು ಸಮರ್ಪಿಸುತ್ತೇನೆ.

ಜೆ. ಎಸ್. ಎಸ್. ಕಾಲೇಜ ಎಸ್. ಬಿ. ತೋಟದ

ಗೋಕಾವಿ

೨೩-೧೦-೧೯೭೬

# ಪರಿವಿಡಿ

# ೧. ನಾಟ್ಯ ವಿಷಯ

## ೧. ನಾಟ್ಯವೆಂದರೇನು ?

ಓದತಕ್ಕ ಅಥವಾ ಕೇಳತಕ್ಕ ಸಾಮಾನ್ಯ ಕಾವ್ಯ, ಅಭಿನಯಿಸಿ ನೋಡತಕ್ಕ ನಾಟಕ ಇವೆರಡನ್ನೂ 'ಕಾವ್ಯ' ಎಂಬ ಶಬ್ದವು ಒಳಗೊಳ್ಳುತ್ತದೆ. "ಕಾವ್ಯೇಷು ನಾಟಕಂ ರಮ್ಯಂ" ಎಂಬ ಪ್ರಶಸ್ತಿ ಮೇಲಿನ ಹೇಳಿಕೆಗೆ ನಿದರ್ಶನ.

### ನಾಟ್ಯ—ನಾಟಕ

ನಾಟ್ಯವೆಂದರೆ ನರ್ತನ, ಅಭಿನಯ, ಗೀತ, ವಾದ್ಯಗಳ ಸಮ್ಮಿಲನ. ಅಭಿನಯದ ಸಹಾಯದಿಂದ ಪ್ರದರ್ಶಿಸಲ್ಪಡಬಹುದಾದ ಕಾವ್ಯಗಳಿಗೆ ದೃಶ್ಯ (ಎಂದರೆ ನೋಡಬಹುದಾದ) ಕಾವ್ಯಗಳೆಂದೂ, ರೂಪಕಗಳೆಂದೂ ಹೆಸರು.

ನಾಟ್ಯವು ಒಂದು ಸಂಕೀರ್ಣ ಕಲೆ, ಇಲ್ಲಿ ಕಾವ್ಯಾಂಶಕ್ಕೆ ಸರ್ವಸ್ವತಂತ್ರ ಸ್ಥಾನವಿಲ್ಲ. ನೃತ್ಯ, ಗಾಯನ, ವೇಷಭೂಷಣ ಇವುಗಳ ಜೊತೆಗೆ ಅದು ಅಭಿನಯದ ಅಂಗವಾಗಿ ಬರುತ್ತದೆ. ಈ ಉಳಿದ ಕಲೆಗಳನ್ನು ಪರಿಶೀಲಿಸುವಾಗ ಅವಕ್ಕೆ ಸಂಬಂಧಪಟ್ಟ ಅಭಿನೇಯವಾದ ಕಾವ್ಯಭಾಗವನ್ನು ಪರಿಶೀಲಿಸುವ ಪದ್ಧತಿ ಬಂದಿತು. ಹೀಗೆ ನಾಟಕವು ತನ್ನ ಸಹಯೋಗಿಗಳ ಪ್ರಭಾವಕ್ಕೆ ಕಟ್ಟುಬಿದ್ದು ಮಿಕ್ಕ ಕಾವ್ಯ ವರ್ಗದಿಂದ ಬೇರೆ

ಯಾಗಿ ನಿಂತಿತು. ಇತ್ತ ಸಾಮಾನ್ಯ ಕಾವ್ಯದ ಲಕ್ಷಣವನ್ನು ನಿರೂಪಿಸಲು ಹೊರಟವರು ನಾಟಕದ ವಿಚಾರವನ್ನು ಉದ್ದೇಶ ಪೂರ್ವಕವಾಗಿಯೇ ಕೈಬಿಟ್ಟರು; ಅದನ್ನು "ಆಗಮಾಂತರ" ವೆಂದು ಎಂದರೆ ಬೇರೆಯ ಶಾಸ್ತ್ರವೆಂದು ಭಾವಿಸಿದರು. ಅಷ್ಟೇ ಅಲ್ಲ ದೃಶ್ಯ ಕಾವ್ಯ, ಶ್ರವ್ಯ ಕಾವ್ಯಗಳೆರಡಕ್ಕೂ ತಿರುಳು ಒಂದೇ; ನಾಟಕದಲ್ಲಿ ಮೊದಲಿನಿಂದಲೂ ರಸಕ್ಕೆ ದೊರೆತಿರುವ ಪ್ರಾಶಸ್ತ್ಯವು ಎಲ್ಲ ಬಗೆಯ ಸಾಹಿತ್ಯಕ್ಕೂ ಅನ್ವಯಿಸತಕ್ಕದ್ದು ಎಂಬುದನ್ನು ಅವರು ಅಂಗೀಕರಿಸುವ ದಕ್ಕೂ ಕೆಲವು ಕಾಲ ಬೇಕಾಯಿತು.[೧]

ರೂಪಕಗಳು

೧. ನಾಟಕ ೨ ಪ್ರಕರಣ ೩. ಭಾಣ ೪. ಪ್ರಹಸನ ೫. ಡಿಮ ೬. ವ್ಯಾಯೋಗ ೭. ಸಮವಾಕಾರ ೮. ವೀಧಿ ೯. ಅಂಕ ೧೦. ಈಹಾಮೃಗ ಎಂದು ಹತ್ತು ವಿಧ. ಇವು ಗಳಲ್ಲದೆ, ನಾಟಿಕೆ, ತ್ರೋಟಕ, ಗೋಷ್ಠಿ, ಸಟ್ಟಕ, ನಾಟ್ಯ ರಾಸಕ, ಪ್ರಸ್ಥಾನಕ, ಉಲ್ಲಾಸ್ಯ, ಕಾವ್ಯ, ಪ್ರೇಂ ಖಣ, ರಾಸಕ, ಸಂಲಾಪಕ, ಶ್ರೀಗದಿತ, ಶಿಲ್ಪಿಕ, ವಿಲಾಸಿಕಾ, ದುರ್ಮಲ್ಲಿಕಾ, ಪ್ರಕರಣಿಕಾ, ಹಲ್ಲೀಶ, ಭಾಣಿಕಾ, ಎಂದು ಹದಿನೆಂಟು ಉಪ ರೂಪಕಗಳಿವೆ.

---

೧. ಭಾರತೀಯ ಕಾವ್ಯ ಮೀಮಾಂಸೆ ಅವತರಣಿಕೆ ಪು ೭
ತೀ. ನಂ. ಶ್ರೀ

## ೨. ನಾಟ್ಯಕ್ಕೆ ಬೇಕಾದ ವಸ್ತುಗಳಾವುವು?

ವಸ್ತು, ನಾಯಕ, ರಸ ಈ ಮೂರು ಅಂಶಗಳು ನಾಟಕಕ್ಕೆ ಅವಶ್ಯ ಬೇಕಾದವುಗಳು. ಇವುಗಳಲ್ಲಿ ರಸವು ಮುಖ್ಯವಾದದ್ದು. ಅದು ದೃಶ್ಯ-ಶ್ರವ್ಯ ಕಾವ್ಯಗಳೆರಡಕ್ಕೂ ಸಂಬಂಧಪಟ್ಟಿರುವುದು.

### ಅ. ವಸ್ತು

'ವಸ್ತು'ವೆಂದರೆ ಕಾವ್ಯದಲ್ಲಿರತಕ್ಕ ಕಥಾ ಭಾಗ. ಇದಕ್ಕೆ 'ಇತಿವೃತ್ತವೆಂದೂ' ಹೆಸರು. ಇದು 'ಆಧಿಕಾರಿಕ' 'ಪ್ರಾಸಂಗಿಕ' ಎಂದು ಎರಡು ವಿಧ. ಆಧಿಕಾರಿಕವೆಂದರೆ ಕಾವ್ಯದ ಉದ್ದಕ್ಕೂ ಬರುವ ಮುಖ್ಯವಾದ ಕಥೆ. ಉದಾಹರಣೆ- ರಾಮಾಯಣ ನಾಟಕದಲ್ಲಿ ರಾಮವೃತ್ತಾಂತ. 'ಪ್ರಾಸಂಗಿಕ' ವೆಂದರೆ ಮುಖ್ಯ ಕಥೆಗೆ ಅಂಗವಾಗಿ ಮಧ್ಯಬರತಕ್ಕ ಕಥೆ. ಉದಾ- ರಾಮಾಯಣದಲ್ಲಿ ವಾಲಿ-ಸುಗ್ರೀವರ ವೃತ್ತಾಂತ. ಪ್ರಾಸಂಗಿಕವು ದೊಡ್ಡದಾಗಿದ್ದರೆ ಅದಕ್ಕೆ 'ಪತಾಕಾ' ಎಂದೂ (ಉದಾಹರಣೆ— ಅಹಲ್ಯಾ ಶಾಪವಿಮೋಚನೆ, ಶಬರೀ ವೃತ್ತಾಂತ ಇತ್ಯಾದಿ.) ಸ್ವಲ್ಪವಾಗಿದ್ದರೆ 'ಪ್ರಕರೀ'ಯೆಂದೂ ಹೆಸರು. ಈ ಮೂರು ವಿಧವಾದ ವಸ್ತುವೂ ಪ್ರಖ್ಯಾತ- ಎಂದರೆ ರಾಮಾಯಣ, ಭಾರತ, ಕಥಾಸರಿತ್ಸಾಗರ ಮುಂತಾದ ಗ್ರಂಥಗಳಲ್ಲಿ ಬಂದು ಪ್ರಸಿದ್ಧವಾಗಿರಬಹುದು. ಅಥವಾ 'ಉತ್ಪಾದ್ಯ'ವಾಗಿ-ಎಂದರೆ ಕವಿಯಿಂದ ಹೊಸದಾಗಿ ಕಲ್ಪಿತವಾಗಿ ಇರಬಹುದು; ಇಲ್ಲವೇ 'ಮಿಶ್ರ' ಎಂದರೆ ಪ್ರಸಿದ್ಧ

ವಾದ ಕಥೆಯಲ್ಲಿ ಬದಲಾವಣೆಯನ್ನು ಮಾಡಿದ್ದು ಆಗಿರಬಹುದು.

ಬ. ನಾಯಕ

ನಾಯಕನು ಧೈರ್ಯ, ಶೌರ್ಯ, ಸೌಂದರ್ಯಾದಿ ಗುಣಗಳುಳ್ಳವನಾಗಿಯೂ, ಸಮರ್ಥನೂ, ತ್ಯಾಗಿಯೂ, ಧಾರ್ಮಿಕನೂ, ಪ್ರಿಯವಾಗಿಯೂ, ಚೆನ್ನಾಗಿ ಮಾತನಾಡತಕ್ಕವನೂ, ವಿದ್ಯಾಬುದ್ಧಿಯುಳ್ಳವನೂ, ಸದ್ವಂಶಜನೂ ಆಗಿರಬೇಕು.

ನಾಯಕನಲ್ಲಿ:– ೧. ಧೀರೋದಾತ್ತ ೨. ಧೀರ ಲಲಿತ ೩. ಧೀರೋದ್ಧತ ೪. ಧೀರ (ಪ್ರ)ಶಾಂತ ಎಂದು ನಾಲ್ಕು ವಿಧ.

೧. ಧೀರೋದಾತ್ತನಲ್ಲಿರುವ ವಿಶೇಷಗುಣವೆಂದರೆ ಸುಖ-ದುಃಖಗಳಿಂದ ಚಲಿತವಾಗದಿರುವ 'ಮಹಾಸತ್ವ' ಗಾಂಭೀರ್ಯ, ಕ್ಷಮೆ, ಆತ್ಮಶ್ಲಾಘನೆ ಮಾಡಿಕೊಳ್ಳದಿರುವುದು, ಸ್ಥೈರ್ಯ, ವಿನಯದಿಂದ ಮುಚ್ಚಿದ ಅಹಂಕಾರ, ಹಿಡಿದ ಕೆಲಸವನ್ನು ಸಾಧಿಸುವ ಸಾಮರ್ಥ್ಯ ಉದಾ—ದುಷ್ಯಂತ, ರಾಮ, ಜೀಮೂತವಾಹನ, ಹರಿಶ್ಚಂದ್ರ ಇತ್ಯಾದಿ.

೨. ಧೀರ ಲಲಿತನಲ್ಲಿರುವ ವಿಶೇಷಗುಣಗಳೇನೆಂದರೆ ಮೃದುತ್ವ, ಸಂಗೀತ, ಸಾಹಿತ್ಯ ಮುಂತಾದ ಕಲೆಗಳಲ್ಲಿ ಆಸಕ್ತನಾಗಿ, ನಿಶ್ಚಿಂತನಾಗಿ ಸುಖವಾಗಿ ಇರುವಿಕೆ ಉದಾಹರಣೆ-ವತ್ಸರಾಜ.

೩. ಧೀರೋದ್ಧತನಲ್ಲಿರುವ ವಿಶೇಷಗುಣ- ದರ್ಪ, ಮಾತ್ಸರ್ಯಗಳು, ಮಾಯಾ ಮೋಸಗಳು, ಅಹಂಕಾರ, ರೌದ್ರ ಚಾಂಚಲ್ಯಗಳು, ಆತ್ಮಶ್ಲಾಘನೆ, ಉದಾಹರಣೆ-ದುರ್ಯೋಧನ, ರಾವಣ.

೪. ಧೀರ (ಪ್ರ)ಶಾಂತನಲ್ಲಿ ವಿಶೇಷ ಗುಣಗಳಿಲ್ಲ. ನಾಯಕನ ಸಾಮಾನ್ಯ ಲಕ್ಷಣಗಳು ಮಾತ್ರ ಇರುತ್ತವೆ. ಉದಾಹರಣೆ– ಮಾಧವ, ಚಾರುದತ್ತ.

ಶೃಂಗಾರ ನಾಯಕರಲ್ಲಿ ದಕ್ಷಿಣ, ಧೃಷ್ಟ, ಅನುಕೂಲ, ಶಠ ಎಂದು ನಾಲ್ಕು ವಿಧ.

೧. ದಕ್ಷಿಣನೆಂದರೆ-ಅನೇಕ ನಾಯಿಕೆಯರಿದ್ದು ಅವರೆಲ್ಲ ರಲ್ಲಿಯೂ ಒಂದೇ ರೀತಿಯಾದ ಪ್ರೇಮವನ್ನು ತೋರಿಸತಕ್ಕ ವನು.

೨. ಧೃಷ್ಟನೆಂದರೆ– ತನ್ನ ಪತ್ನಿಯಲ್ಲಿ ಅಪರಾಧ ಮಾಡಿ ದೋಷಗಳು ಸ್ಪಷ್ಟವಾಗಿದ್ದು ತಾನು ಆಕ್ಷೇಪಣೆಗೆ ಗುರಿಯಾದರೂ ನಾಚಿಕೆಪಟ್ಟುಕೊಳ್ಳದವನು.

೩. ಅನುಕೂಲನೆಂದರೆ- ಒಬ್ಬಳೇ ನಾಯಿಕೆಯಲ್ಲಿ ಅನುರಕ್ತನಾಗಿರುವವನು.

೪. ಶಠನೆಂದರೆ- ಅನೇಕ ನಾಯಿಕೆಯರಲ್ಲಿ ಹೊರಗೆ ಸಮಾನವಾದ ಅನುರಾಗವನ್ನು ತೋರಿಸುತ್ತ ಒಳಗೆ ಒಬ್ಬ ಳನ್ನು ಹೆಚ್ಚಾಗಿ ಪ್ರೀತಿಸುತ್ತ ಮತ್ತೊಬ್ಬಳಿಗೆ ತೊಂದರೆ ಮಾಡುವವನು.

## ನಾಯಕನ ಸಹಾಯಕರು

೧. ಪ್ರಾಸಂಗಿಕ ವಸ್ತುವಿನಲ್ಲಿ-ಪೀಠ ಮರ್ದ, ಪ್ರಾಸಂಗಿಕ ವಸ್ತುವಿನಲ್ಲಿ ಬರುವವನು; ಮತ್ತು ನಾಯಕನಿಗಿಂತ ಗುಣ ದಲ್ಲಿ ಸ್ವಲ್ಪ ಕಡಿಮೆಯಾದವನು. ಉದಾಹರಣೆ-ಸುಗ್ರೀವ, ಮಕರಂದ.

೨. ಶೃಂಗಾರದಲ್ಲಿ-ವಿಟ, ಚೇಟ (ಸೇವಕ), ವಿದೂಷಕಾ ದಿಗಳು.

೩. ರಾಜತಂತ್ರ ವಿಚಾರದಲ್ಲಿ–ಮಂತ್ರಿ.

೪. ಅಂತಃಪುರದಲ್ಲಿ–ಕುಬ್ಜ, ಷಂಡ, ಕಿರಾತ, ಮ್ಲೇಚ್ಛ.

೫. ಧರ್ಮದಲ್ಲಿ ಋತ್ವಿಕ್ಕುಗಳು, ತಪಸ್ವಿಗಳು. ಬ್ರಹ್ಮ ವಾದಿಗಳು.

೬. ದುಷ್ಟದಮನದಲ್ಲಿ ಸ್ನೇಹಿತ, ಸಾಮಂತ, ಸೈನಿಕ ಮೊದಲಾದವರು.

## ನಾಯಿಕೆ

ನಾಯಿಕೆಯರಲ್ಲಿ' ಸ್ವೀಯೆ' (ತನ್ನವಳು) 'ಅನ್ಯೆ'(ಇತರಳು) 'ಸಾಧಾರಣೆ' 'ವೇಶ್ಯೆ' ಎಂದು ಮೂರುವಿಧ. ಸ್ವೀಯಳಲ್ಲಿ ಯೌವನ ಮತ್ತು ಸಂಸಾರಾನುಭವದ ಮೇಲೆ 'ಮುಗ್ಧೆ' 'ಮಧ್ಯೆ' 'ಪ್ರಗಲ್ಭೆ' ಎಂದು ಮೂರು ವಿಧ.

## ನಾಯಿಕೆಯರ ಸಹಾಯೆಯರು

ದಾಸಿ, ಸಖಿ, ಕೆಲಸಗಾತಿ, ಶಾಕುತ್ತಿರುವ ಹುಡುಗಿ, ನೆರೆ ಯವಳು; ಸನ್ಯಾಸಿನೀ, ಶಿಲ್ಪಿನಿ, ಮುಂತಾದವರು.[೧]

---

೧. ಕನ್ನಡ ಕೈಪಿಡಿ, ಸಂಪುಟ- ೧, ದೃಶ್ಯಕಾವ್ಯಗಳು
ಪ್ರಧಾನ ಸಂಪಾದಕರು- ಡಾ. ಕೆ. ವಿ. ಪುಟ್ಟಪ್ಪ ಎಂ.ಎ., ಡಿ.ಲಿಟ್.

## ಕ. ರಸ

" ವಿಭಾವಾನುಭಾವ ವ್ಯಭಿಚಾರಿ ಸಂಯೋಗಾದ್ರಸ ನಿಷ್ಪತ್ತಿಃ " ವಿಭಾವಗಳು, ಅನುಭಾವಗಳು, ಸಂಚಾರಿ ಭಾವಗಳು -ಇವುಗಳ ಸಂಯೋಗದಿಂದ ರಸ ನಿಷ್ಪತ್ತಿಯಾಗುವುದು. ಇದೇ ಭರತನ ಪ್ರಖ್ಯಾತವಾದ ಸೂತ್ರ.

### ರಸ ಪ್ರಭೇದಗಳು

ಎಲ್ಲ ರಸಗಳ ಸಾರವು ಒಂದೇ ಆದರೂ ಅನುಭವ ಕಾಲದಲ್ಲಿ. ವಿಭಾವಾನುಭಾವಾದಿಗಳು ಸಂವಲಿತವಾಗಿಯೇ ಇರುವುದರಿಂದ ಒಂದೊಂದರ ರುಚಿಯಲ್ಲೂ ವೈಚಿತ್ರ್ಯವುಂಟಾಗುತ್ತದೆ. ಬೇಲದ ಹಣ್ಣಿನ ಪಾನಕ, ನಿಂಬೆ ಹಣ್ಣಿನ ಪಾನಕ, ಸೊಗದೆಯ ಬೇರಿನ ಷರಬತ್ತು ಈ ಎಲ್ಲವೂ ಪಾನಕಗಳೇ; ಎಲ್ಲವೂ ಸಿಹಿಯೇ. ಆದರೆ ಒಂದೊಂದರ ಸವಿಯಲ್ಲೂ ವೈಚಿತ್ರ್ಯವುಂಟಲ್ಲವೆ? ಇದೇ ದೃಷ್ಟಿಯಿಂದ ರಸಗಳನ್ನು ವಿಂಗಡಿಸಬಹುದು. ಭರತನು ಎಂಟು ಸ್ಥಾಯೀ ಭಾವಗಳಿಗೆ ಸಮನಾಗಿ ಎಂಟು ರಸಗಳನ್ನು ವಿಂಗಡಿಸುತ್ತಾನೆ.

ಶೃಂಗಾರ ಹಾಸ್ಯ ಕರುಣಾ ರೌದ್ರ ವೀರ ಭಯಾನಕಾಃ
ಬೀಭತ್ಸಾದ್ಭುತ ಸಂಜ್ಞೌ ಚೇತ್ಯಷ್ಟೌ ನಾಟ್ಯೇರಸಾಃ
ಸ್ಮೃತಾಃ॥[೧]

ಶೃಂಗಾರಕ್ಕೆ ಸ್ಥಾಯಿ ಭಾವ--ರತಿ; ಹಾಸ್ಯಕ್ಕೆ-ಹಾಸ; ಕರುಣಕ್ಕೆ-ಶೋಕ, ರೌದ್ರಕ್ಕೆ-ಕ್ರೋಧ; ವೀರಕ್ಕೆ-ಉತ್ಸಾಹ;

---

೧. ನಾಟ್ಯ ಶಾಸ್ತ್ರ ಷಷ್ಠೋಧ್ಯಾಯಃ ಶ್ಲೋಕ-೧೫. — ಭರತ

ಭಯಾನಕಕ್ಕೆ–ಭಯ, ಭೀಭತ್ಸಕ್ಕೆ–ಜುಗುಪ್ಸೆ ಅದ್ಭುತಕ್ಕೆ-ವಿಸ್ಮಯ.

ಭರತಮುನಿಯ ಪ್ರಕಾರ ಎಂಟುರಸಗಳು ನಾಟಕದಲ್ಲಿ ಮುಖ್ಯವಾದವುಗಳು. ನವೀನರು 'ಶಾಂತ' ರಸವನ್ನು ಕೂಡಿಸಿ ನವರಸಗಳಿಂದ ಕೂಡಿದುದು ನಾಟಕವೆಂದು ಅಭಿಪ್ರಾಯಪಟ್ಟಿರುವರು.

ಶೃಂಗಾರ, ಹಾಸ್ಯ, ಕರುಣ, ರೌದ್ರ, ವೀರ, ಭಯಾನಕ ಬೀಭತ್ಸ, ಅದ್ಭುತ, ಶಾಂತ ಎಂಬ ಒಂಬತ್ತು ರಸಗಳಿವೆ.

## ರಂಗದೇವತಾ ಪೂಜೆ ನಾಂದಿ ವಗೈರೆ

ನಾಟಕದಲ್ಲಿ ಪೂರ್ವರಂಗವೆಂದರೆ ಕಥೆಯು ಪ್ರಾರಂಭವಾಗುವ ಪೂರ್ವದಲ್ಲಿ ನಟ-ನಟಿಯರು ನಡೆಸತಕ್ಕ ಕಾರ್ಯಗಳು. ಗಾಯಕರು ವಾದ್ಯಗಳನ್ನು ಸರಿಪಡಿಸಿಕೊಂಡು ಶ್ರುತಿ ಮಾಡಿಕೊಳ್ಳುವದು. ನಂತರ ರಂಗದೇವತೆಯ ಪೂಜೆ.

ನಾಂದಿ-ದೇವತಾ ಸ್ತೋತ್ರ ರೂಪವಾಗಿಯೂ ರಾಜ ಪ್ರಜೆ ಮುಂತಾದವರಿಗೆ ಆಶೀರ್ವಾದ ರೂಪವಾಗಿರತಕ್ಕ ವಚನ. ನಾಟಕಾದಿಯಲ್ಲಿ ಕವಿನಿಬದ್ಧವಾದ ಮಂಗಳ ಶ್ಲೋಕವು ನಾಂದಿ ಶ್ಲೋಕವಲ್ಲವೆಂದೂ ಪರ್ವರಂಗದ ಅಂಗವಾದ 'ರಂಗದ್ವಾರ'ವೆಂದೂ ಕೆಲವರು ಅಭಿಪ್ರಾಯಪಡುತ್ತಾರೆ.[೧]

---

೧. ಸಾಹಿತ್ಯದರ್ಪಣ ಅಧ್ಯಾಯ- ವೃತ್ತಿ೬-೨೫.—ವಿಶ್ವನಾಥ

ಭರತನ ನಾಟ್ಯ ಶಾಸ್ತ್ರವನ್ನು ನೋಡಿದರೆ ನಾಂದಿ ರಂಗ ದ್ವಾರಗಳು ಬೇರೆ ಬೇರೆಯೆಂದೂ, ನಾಂದಿ ಮೊದಲು ನಟರು ಹೇಳುವ ಸಾಂಪ್ರದಾಯಿಕವಾದ ಸಾಮಾನ್ಯ ಮಂಗಳ ವೆಂದೂ ತೋರುತ್ತದೆ.[೧]

ನಾಟ್ಯಗೃಹ ಮುಂತಾದವುಗಳು ಅವಶ್ಯ ವಸ್ತುಗಳು.

## ೩. ನಾಟ್ಯ ಪ್ರಪಂಚ

ನಾಟ್ಯ ಪ್ರಪಂಚಕ್ಕೂ, ವ್ಯವಹಾರಿಕ ಪ್ರಪಂಚಕ್ಕೂ ಏನು ಭೇದ? ಜೀವನ್ಮುಕ್ತರ ದೃಷ್ಟಿಯಲ್ಲಿ ಹೇಗಾದರೂ ಇರಲಿ, ಸಂಸಾರಿಗಳಿಗೆ ದಿನ ಬಳಕೆಯ ಪ್ರಪಂಚವು ವಾಸ್ತವಿಕವೆಂದು ತೋರುವದು ಖಂಡಿತ. ಇದರ ಅಸ್ತಿತ್ವ ದಿಟವೆಂದೇ ನಂಬಿ ದಿನ ದಿನದ ವ್ಯವಹಾರಗಳಲ್ಲಿ ತೊಡಗುತ್ತೇವೆ; ಇಲ್ಲಿಯ ಮಾನವರೊಂದಿಗೆ ವೈಯಕ್ತಿಕವಾದ ಸಂಬಂಧವನ್ನಿಟ್ಟು ಕೊಳ್ಳುತ್ತೇವೆ. ಅವರೊಡನೆ ಮಾತನಾಡುತ್ತೇವೆ. ಕೆಲಸ ಮಾಡುತ್ತೇವೆ. ಇಲ್ಲಿ ಕೆಲವರು ನಮಗೆ ಬೇಕಾದವರು. ಇವರಿಗೆ ಸುಖವಾದರೆ ನಮಗೆ ಸುಖ; ಇವರಿಗೆ ದುಃಖ ಒದಗಿದರೆ ನಮಗೂ ದುಃಖ. ಮತ್ತೆ ನಮಗೆ ಕೆಲವರು ಆಗದವರು. ಇವರ ದುಃಖದಲ್ಲಿ ನಾವು ಹಿಗ್ಗದಿದ್ದರೂ, ಇವರ ಸುಖದಲ್ಲಿ ಆನಂದಪರವಾದರಾಗುವದಿಲ್ಲ. ಬಹುಮಂದಿ ಉದಾ ಸೀನರು. ಇವರ ಸುಖ-ದುಃಖಗಳನ್ನು ಮನಸ್ಸಿಗೆ ಹತ್ತಿಸಿ ಕೊಳ್ಳದೆ ನಾವು ಉದಾಸೀನರಾಗಿಯೇ ಬಾಳುತ್ತೇವೆ. ವಸ್ತು ಗಳ ವಿಷಯದಲ್ಲಿಯೂ ಹೀಗೆಯೇ. ಇವನ್ನು ಮುಟ್ಟ

---

೧. ಸಾಹಿತ್ಯದರ್ಪಣ ಅಧ್ಯಾಯ- ೬, ವೃತ್ತಿ-೨೫ - ವಿಶ್ವನಾಥ

ಬಹುದು, ಉಪಯೋಗಿಸಬಹುದು. ಬಯಸಬಹುದು, ಗಳಿಸ ಬಹುದು, ದೂರೀಕರಿಸಬಹುದು, ಒಂದನ್ನೂ ಗಮನಿಸದೆ ಎತ್ತಲೋ ಸಾಗಬಹುದು. ಅಂತೂ ಲೋಕದ ವ್ಯಕ್ತಿಗಳೊಂದಿಗೂ, ವಸ್ತುಗಳೊಂದಿಗೂ, ವ್ಯವಹಾರಿಕವಾದ, ವೈಯುಕ್ತಿಕವಾದ ನಿಯತ ಸಂಬಂಧವೊಂದು ನಮಗಿದ್ದೇ ಇರುತ್ತದೆ. ಈ ಸ್ವಕೀಯ, ಪರಕೀಯ ಎಂಬ ಭಾವನೆಯನ್ನು, ಇದರಿಂದ ಒದಗುವ ರಾಗ ದ್ವೇಷಾದಿಗಳನ್ನು ನಾವು ಸಾಮಾನ್ಯವಾಗಿ ಬಿಡಲಾರೆವು.

ನಾಟ್ಯ ಪ್ರಪಂಚದ ಸ್ಥಿತಿ ಬೇರೆ. ಅದು ಕವಿ ಪ್ರತಿಭೆಯಿಂದ ನಿರ್ಮಿತವಾದದ್ದು; ನಟನ ಚಾತುರ್ಯದಿಂದ ಪ್ರದರ್ಶಿತ ವಾದದ್ದು. (ಕೇವಲ ಕಾವ್ಯದಲ್ಲಿಯಂತೂ ಈ ನಟರು ಕೂಡ ಇರುವುದಿಲ್ಲ; ನಮ್ಮ ಪ್ರತಿಭೆ ಕಲ್ಪಿಸಿದ ರಂಗಭೂಮಿಯಲ್ಲೇ ಎಲ್ಲವೂ ಸಾಕ್ಷಾತ್ಕಾರವಾಗುತ್ತದೆ.) ಅಲ್ಲಿಯೂ ಮಾನವರು ಸುಳಿದಾಡುತ್ತಿದ್ದರೂ, ಮಾತು ಕಥೆಗಳು ನಡೆಯುತ್ತಿದ್ದರೂ, ಕಷ್ಟ-ನಿಷ್ಠುರಗಳು ತೋರಿಬರುತ್ತಿದ್ದರೂ, ಇವು ಲೋಕದ ನಡೆವಳಿಕೆಗಳಂತೆ ದಿಟವಲ್ಲ; 'ವಾಸ್ತವಿಕ' ಅಲ್ಲ. ಈ ಮಾತನ್ನು ಕೀಳಾದ ಅರ್ಥದಲ್ಲಿ ಗ್ರಹಿಸಬಾರದು. ಇಲ್ಲಿ "ಅವಾಸ್ತವಿಕ" ಎಂದರೆ ಲೋಕವಿದಿತವಾದ ಸಾಂಸಾರಿಕ ವ್ಯವಹಾರಕ್ಕೆ ನಿಲುಕ ತಕ್ಕದ್ದಲ್ಲ. ಎಂದಷ್ಟೇ ತಾತ್ಪರ್ಯ; ಇದೆಲ್ಲ ಅವಾಸ್ತವಿಕವಾದ ಕಾರಣವೇ "ಲೋಕೋತ್ತರ" (ಅಥವಾ ಅಲೌಕಿಕ)ವೂ ಆಗುತ್ತದೆ. ಅಂತೂ ಆ ಜಗತ್ತಿನ ವ್ಯಕ್ತಿಗಳೊಡನೆ ನಾವು ವ್ಯವ ಹಾರ ಮಾಡಲಾರೆವು; ಅಲ್ಲಿ ತೋರುವ ವಸ್ತುಗಳನ್ನು ದಿನ ಚರಿಯ ಉಪಯೋಗಕ್ಕಾಗಿ ಬಳಸಲಾರೆವು. ನಾಟಕವು

ಗೋಚರವಾಗುತ್ತಿರುವವರೆಗೆ, ಕಾವ್ಯವನ್ನು ಓದುತ್ತಿರುವವರೆಗೆ ಮಾತ್ರ ಇದೆಲ್ಲದರ ಅಸ್ತಿತ್ವ ಕವಿ-ನಟ-ಸಹೃದಯರ ಪ್ರತಿಭೆಯೊಂದೇ ಈ ಜಗತ್ತಿನ ಅಧಿಷ್ಠಾನವಾದ ಕಾರಣ ಮಾನಸಿಕವಾಗಿ ಪರಿಭಾವಿಸುವುದು ಮಾತ್ರ ಸಾಧ್ಯ.[೧]

## ೪. ನಾಟಕ ಸಾಹಿತ್ಯ

ಕನ್ನಡ ಸಾಹಿತ್ಯದಲ್ಲಿ ವಿವಿಧ ಪ್ರಕಾರಗಳನ್ನು ನಾವು ಕಾಣುತ್ತೇವೆ. ಆದರೆ ನಾಟಕ ಸಾಹಿತ್ಯವು ಅವುಗಳೊಂದಿಗೆ ಬೆಳೆಯದಿರುವುದು ಆಶ್ಚರ್ಯಕರವಾಗಿದೆ. ಈಗ ಉಪಲಬ್ಧವಿದ್ದ ಕನ್ನಡ ನಾಟಕ ಸಾಹಿತ್ಯದಲ್ಲಿ 'ಮಿತ್ರವಿಂದಾಗೋವಿಂದ'ವೇ ಮೊದಲನೆಯ ಕೃತಿಯಾಗಿದೆ. ಅದು ಹುಟ್ಟಿದ ಕಾಲ ಹದಿನೇಳನೆಯ ಶತಮಾನ. ಆ ಪೂರ್ವದಲ್ಲಿ ಕನ್ನಡ ನಾಟಕಗಳು ಇದ್ದಿರಬೇಕೆಂದು ಪಂಡಿತರು ಊಹಿಸುವರಾದರೂ ಕೃತಿಗಳು ನಮಗೆ ಸಿಕ್ಕಿಲ್ಲ; ಇದ್ದರೂ ಕಾಲಗರ್ಭದಲ್ಲಿ ಹೂತು ಹೋದವೋ ಏನೋ[೨] ಎಂದು ಡಾ| ಎಂ. ಎಸ್. ಸುಂಕಾಪುರರವರು ಊಹಿಸಿದುದು ಸಮಂಜಸವಾಗಿದೆ. ಏಕೆಂದರೆ ಸಂಸ್ಕೃತಿ ಸಾಹಿತ್ಯ ಭಾಂಡಾಗಾರವನ್ನು ಸೂರೆಗೈದ ಹಳಗನ್ನಡ ಕವಿಗಳು ಅಲ್ಲಿರುವ ನಾಟಕಗಳನ್ನು ಮೆಚ್ಚಿದರೂ ಅವುಗಳನ್ನು ಕನ್ನಡಕ್ಕೆ ತರುವ ಕಾರ್ಯವನ್ನು ಮಾಡಿಲ್ಲ.

---

೧. ಭಾರತೀಯ ಕಾವ್ಯ ಮೀಮಾಂಸೆ- ೨೨ ರಸಾನುಭವ-೨ ಪು. ೩೬೧
ತೀ. ನಂ. ಶ್ರೀ ಕಂಠಯ್ಯ ಎಂ. ಎ.

೨. ಕನ್ನಡ ಸಾಹಿತ್ಯದಲ್ಲಿ- ಹಾಸ್ಯ ನಾಟಕ ಸಾಹಿತ್ಯ- ಪು. ೩೨೧
ಡಾ. ಎಂ. ಎಸ್. ಸುಂಕಾಪುರ, ಎಂ.ಎ. ಪಿಎಚ್.ಡಿ

ಮೊದಲನೆಯ ನಾಟಕವಾದ 'ಮಿತ್ರವಿಂದಾ ಗೋವಿಂದ'ದ ಅನಂತರ ೧೯ನೇ ಶತಮಾನದ ಕೊನೆಯ ಭಾಗದ ವರೆಗೆ ಕನ್ನಡದಲ್ಲಿ ಪುನಃ ನಾಟಕ ಕೃತಿಗಳು ಹುಟ್ಟಲಿಲ್ಲ. ಆಮೇಲೆ ಸಂಸ್ಕೃತ ನಾಟಕಗಳ ಭಾಷಾಂತರವು ಪ್ರಾರಂಭವಾಯಿತು. ಇವುಗಳಿಂದ ಮುಂದೆ ಕಂಪನಿ ನಾಟಕಗಳ ಉಗಮವಾಯಿತು. ಈಗಂತೂ ಕನ್ನಡ ಸಾಹಿತ್ಯದಲ್ಲಿ ಇಂಗ್ಲೀಷ, ಸಂಸ್ಕೃತ, ಗ್ರೀಕ ಸಾಹಿತ್ಯಗಳ ಪ್ರಭಾವದಿಂದ ಕನ್ನಡದಲ್ಲಿ ನಾಟಕಗಳು ಹುಲುಸಾಗಿ ಬೆಳೆಯತೊಡಗಿದ ಪ್ರ. ದಿ. ಕೈಲಾಸಂ, ಶ್ರೀರಂಗ, ದಾಸರಥಿ ದೀಕ್ಷಿತ, ಡಾ ಕುವೆಂಪು, ಎಂ. ಆರ್. ಶ್ರೀನಿವಾಸ ಮೂರ್ತಿ ಮುಂತಾದವರು ನಾಟಕಗಳನ್ನು ಬರೆದು ತಮ್ಮ ಸೇವೆಯನ್ನು ಸಲ್ಲಿಸಿದ್ದಾರೆ. ಅದರಂತೆ ದಿ. ಹನಮಂತರಾವ ಕಂದಗಲ್ಲ. ವರದರಾಜ ಹುಯಿಲಗೋಳ ಕೆರೂರ ವಾಸುದೇವಾಚಾರ್ಯ, ಸಧಾಶಿವರಾವ ಗರುಡ, ನಲವಡಿ ಶ್ರೀಕಂಠ ಶಾಸ್ತ್ರಿ, ಎಚ್. ಟಿ. ಮಹಾಂತೇಶ ಶಾಸ್ತ್ರಿ ಮುಂತಾದ ಇನ್ನೂ ಅನೇಕ ಕಲಾವಿದರು ಸಂಗೀತ ನಾಟಕಗಳನ್ನು ಬರೆದಿರುವರು. ಇವರಲ್ಲಿ ದಿವಂಗತ ಸದಾಸಿವರಾವ ಗರುಡ, ದಿವಂಗತ ಹನಮಂತರಾವ ಕಂದಗಲ್ಲ ಇವರ ಸೇವೆಯು ನಾಟ್ಯ ಪ್ರಪಂಚಕ್ಕೆ ಅಮೋಘವಾದುದು.

ಮೈಸೂರಿನ ವರದಾಚಾರ್ಯರು, ನಾಟ್ಯರತ್ನ ವೀರಣ್ಣ ಗುಬ್ಬಿ, ಸುಬ್ಬಯ್ಯನಾಯ್ಡು, ಆರ್, ನಾಗೇಂದ್ರರಾವ, ಹಿರಣ್ಣಯ್ಯ ಮುಂತಾದ ಕಲಾವಿದರು ಕಂಪನಿಗಳನ್ನು ಪ್ರಾರಂಭಿಸಿ, ರಂಗಭೂಮಿಗೆ ಅಮೋಘ ಸೇವೆಯನ್ನು

ಸಲ್ಲಿಸಿದ್ದಾರೆ. ಉತ್ತರ ಕರ್ನಾಟಕದಲ್ಲಿ 'ವಿಶ್ವಕಲಾ ನಾಟ್ಯ ಕಂಪನಿ', 'ಕಲಾ ವೈಭವ ನಾಟ್ಯ ಕಂಪನಿ', 'ಶಾರದಾ ನಾಟ್ಯ ಕಂಪನಿ', 'ಹುಚ್ಚೇಶ್ವರ ನಾಟ್ಯ ಕಂಪನಿ', ಕಮತಗಿ 'ಸಂಗಮೇಶ್ವರ ನಾಟ್ಯ ಕಂಪನಿ', 'ಮಲ್ಲಿಕಾರ್ಜುನ ನಾಟ್ಯ ಕಂಪನಿ', ಇನ್ನೂ ಅನೇಕ ಕಂಪನಿಗಳು ರಂಗಭೂಮಿಯ ಸೇವೆಯನ್ನು ಮಾಡಿರುವವು; ಇನ್ನು ಕೆಲವು ಮಾಡುತ್ತಲಿರುವವು. ಇಂದಿನ ಚಲನಚಿತ್ರಯುಗದಲ್ಲಿಯೂ ಕೂಡಾ ನಾಟಕ ಕಂಪನಿಗಳು ಬದುಕಿ ತಮ್ಮ ಸೇವೆಯನ್ನು ಮುಂದುವರೆಯಿಸಿರುವವು. ಇಂದು ಸಮಾಧಾನವಾಗುವಷ್ಟರ ಮಟ್ಟಿನಲ್ಲಿ ನಾಟಕಗಳು ಬೆಳೆದು ಬಂದರೂ ಅವುಗಳಲ್ಲಿ ಉದಾತ್ತ ನಾಟಕಗಳ ಕೊರತೆಯೂ ಕಂಡುಬರುವದು. ಇಂದಿನ ಅನೇಕ ನಾಟಕಗಳ ಸಾಹಿತ್ಯದ ಅಂಶವು ಕಡಿಮೆಯಿದ್ದು, ಸಾಮಾನ್ಯ ಜನರು ಮೆಚ್ಚುವಂಥ ಹಾಸ್ಯ ಪ್ರಧಾನ ನಾಟಕಗಳೇ ಹೆಚ್ಚಾಗಿರುವುದು ಕಂಡುಬರುವದು. ಇದನ್ನು ಹೋಗಲಾಡಿಸಿ ರಂಗಭೂಮಿಯ ಪವಿತ್ರತೆಯನ್ನು ಕಾಯ್ದುಕೊಳ್ಳಬೇಕು. ಕಲೆಯು ಅನಂತವಾದುದು, ಅಮರವಾದುದು. ಈ ಅಮರತೆಯನ್ನು ನಾಟ್ಯ ಪ್ರಪಂಚವು ಇಂದು ಪಡೆಯಬೇಕು.

## ೨. ಕನ್ನಡ ಕಾವ್ಯಗಳಲ್ಲಿ ನಾಟಕೀಯತೆ

೧೦ನೆಯ ಶತಮಾನವು ಕನ್ನಡ ಸಾರಸ್ವತ ಪ್ರಪಂಚಕ್ಕೆ ಉಕ್ಕುಬಂದ ಕಾಲ. ಪಂಪ, ಪೊನ್ನ, ರನ್ನರಂತಹ ರತ್ನತ್ರಯರೂ ಪೊನ್ನ, ರನ್ನರಂತಹ ಕವಿಚಕ್ರವರ್ತಿಗಳೂ (ಮುಂದೆ ಜನ್ನನೂ ೧೩ನೆಯ ಶತಮಾನದಲ್ಲಿ ಕವಿಚಕ್ರವರ್ತಿಯೆಂಬ ಬಿರುದನ್ನು ಪಡೆಯುವನು. ಆದುದರಿಂದ ಅವನನ್ನು ಕವಿಚಕ್ರವರ್ತಿಗಳಲ್ಲಿ ಸಮಾವೇಶಗೊಳಿಸಲಾಗಿದೆ.) ಉದಯಿಸಿದ ಕಾಲ.

ಪ್ರಾಚೀನ ಕನ್ನಡ ಕವಿಗಳಲ್ಲಿ ನಾಟಕೀಯ ಪ್ರತಿಭೆ ವಿಪುಲವಾಗಿದ್ದಿತೆಂಬುದಕ್ಕೆ ಅನೇಕ ನಿದರ್ಶನಗಳನ್ನು ಕೊಡಬಹುದು. ಪಂಪನ ‘ವಿಕ್ರಮಾರ್ಜುನ ವಿಜಯ,’‘ಆದಿಪುರಾಣ’ಗಳಂತಹ ಮಹಾಕಾವ್ಯಗಳಲ್ಲಿ ನಾಟಕೀಯ ಸನ್ನಿವೇಶಗಳು ಅನೇಕ ಕಡೆಗೆ ಬಂದುದುಂಟು.

ವಿಕ್ರಮಾರ್ಜುನ ವಿಜಯದಲ್ಲಿ ದ್ರೌಪದಿಯ ಮಾನಭಂಗ, ಭೀಷ್ಮನ ವೀರಪಟ್ಟ, ಕುರು-ಪಾಂಡವರ ಯುದ್ಧದ ಸನ್ನಿವೇಶಗಳು; ಕೀಚಕವಧೆ, ಭೀಮ-ದುರ್ಯೋಧನರ ಗದಾಯುದ್ಧ, ಆದಿಪುರಾಣದಲ್ಲಿ ‘ಕಿರಾತಾರ್ಜುನರ ಕಾಳಗ,’ ಭರತ-ಬಾಹುಬಲಿಯರ ಕಾಳಗ, ಇವುಗಳಲ್ಲಿ ನಾಟಕೀಯ ಅಂಶವು ಸ್ಫುಟವಾಗಿ ಕಾಣುವುದು. ಏಕೆಂದರೆ ಅಲ್ಲಿ ಬರುವ

ಪಾತ್ರಗಳ ಸಂವಾದ ಕಾವ್ಯದಲ್ಲಿ ನಾಟಕೀಯ ರೂಪದಲ್ಲಿ ಕಂಡುಬರುವುದು.

ಗದಾಯುದ್ಧವನ್ನಂತೂ ಬಿ. ಎಂ. ಶ್ರೀ. ಯವರು ನಾಟ್ಯ ರೀತಿಯಲ್ಲೇ ರಚಿಸಿರುವರು. ಅದರಂತೆ. ಹರಿಶ್ಚಂದ್ರ ಕಾವ್ಯ ಕುಮಾರವ್ಯಾಸ ಭಾರತ. ಲಕ್ಷ್ಮೀಶನ ಜೈಮಿನಿ ಭಾರತದಲ್ಲಿಯೂ ಸಂವಾದ ಸ್ವಾರಸ್ಯವನ್ನು ಕಂಡಕೊಳ್ಳುವೆವು. ಕಾವ್ಯವನ್ನು ಓದಿದಾಗ ಪಾತ್ರಗಳು ಪ್ರತ್ಯಕ್ಷ ಬಂದು ನಿಂತು ಸಂಭಾಷಣೆ ಮಾಡಿದಂತಾಗುವುದು. ಈ ಬಗೆಗೆ ಆಯಾ ಕಾವ್ಯಗಳನ್ನು ವಿಮರ್ಶಿಸುವಾಗ ವಿವೇಚಿಸುವೆ.

## ೧. ವಿಕ್ರಮಾರ್ಜುನ ವಿಜಯ

ಕುರು ಪಾಂಡವರ ಯುದ್ಧವು ಅನಿವಾರ್ಯವಾಗಿ ಪ್ರಾರಂಭವಾಗುವುದು. ಪಾಂಡವರು ಪಾರ್ಥನಿಗೆ ವೀರ ಪಟ್ಟವನ್ನು ಕಟ್ಟುವರು. ದುಯೋ೯ಧನನು ಭೀಷ್ಮಾ ಚಾರ್ಯರಿಗೆ ವೀರಪಟ್ಟವನ್ನು ಕಟ್ಟುವ ಸಮಯದಲ್ಲಿ ನಡೆದ ಸಂವಾದ.

ದುಯೋ೯ಧನನು ಸುಯೋ೯ದಯದಲ್ಲಿ ದೂತರನ್ನು ಕಳು ಹಿಸಿ ಮಂದಾಕಿನಿಯ ಮಗನಿಗೆ ವೀರಪಟ್ಟವನ್ನು ಕಟ್ಟಲು ಸಹಸ್ರ ನರಪತಿಗಳೊಡನೆ ಆಲೋಚಿಸಿ ಖಚಿತವಾದ ಅಭಿ ಪ್ರಾಯಕ್ಕೆ ಬಂದು ಗಾಂಗೇಯನನ್ನು ಮಣಿಮಯ ಪೀಠ ದಲ್ಲಿ ಕುಳ್ಳಿರಿಸಿ ದೇವಾಸುರ ಯುದ್ಧದಲ್ಲಿ ಷಣ್ಮುಖನಿಗೆ ವೀರಪಟ್ಟವನ್ನು ಇಂದ್ರನು ಕಟ್ಟುವಂತೆ ಸುಯೋಧನನು

ಸಿಂಧುನಂದನನಿಗೆ ವೀರ ಪಟ್ಟವನ್ನು ಕಟ್ಟುವನು. ಈ ಕೃತಿಯು ಕರ್ಣನ ಮನಸ್ಸಿಗೆ ಬರುವುದಿಲ್ಲ. ಮುಪ್ಪಾನ ಮುದುಪನಾದ ಗಾಂಗೇಯನನು ಶೂರರಾದ ಪಾಂಡವರನ್ನು ಗೆಲ್ಲುವುದು ಸಾಧ್ಯವಿಲ್ಲವೆಂಬುದೇ ಕರ್ಣನ ಅಭಿಮತ. ಆದುದರಿಂದ ಕರ್ಣ—

ಕಟ್ಟಿದ ಪಟ್ಟಮೆ ಸರವಿಗೆ।
ನೆಟ್ಟನೆ ದೊರೆ ಪಿಡಿದ ಬಿಲ್ಲೆ ದಂಟಂಗೆಪೆ ಕ।
ಣ್ಗೆಟ್ಟ ಮುದುಪಂಗೆ ಪಗೆವರ।
ನಿಟ್ಟೆಲ್ವಂ ಮುಱಿವೊಡೆನಗೆ ಪಟ್ಟಂಗಟ್ಟಾ[1]॥
ಆದಿಯೊಳವರಂ ಪಿರಿದೊಂ।
ದಾದರದಿಂ ನಡಪಿದಜ್ಜರಪ್ಪುದಱಿಂದಂ॥
ಕಾದರಿವರವರೊಳವರುಂ।
ಕಾದರ್ ನೆರೆದಿವರೊಳೆಂತು ನಂಬುವೆ ನೃಪತೀ[2]॥

"ದೃಷ್ಟಿಪಾಟವಿಲ್ಲದ ಮುದುಕನಿಗೆ ಕಟ್ಟಿದ ವೀರಪಟ್ಟವೆ, ಹಗ್ಗಕ್ಕೆ ಸಮಾನ. ಅವನು ಹಿಡಿದಿರುವ ಬಿಲ್ಲು ದಂಟಿಗೆ ಸಮಾನ. ಹಗೆಗಳ ನೀಳವಾದ ಮೂಳೆಗಳನ್ನು ಮುರಿಯ ಬೇಕಾದರೆ ನನಗೆ ವೀರಪಟ್ಟವನ್ನು ಕಟ್ಟು. ಏಕೆಂದರೆ ಭೀಷ್ಮರು ಮೊದಲು ಪಾಂಡವರನ್ನು ಹಿರಿದಾದ ಪ್ರೀತಿ ಯಿಂದ ಸಲುಹಿದ ಅಜ್ಜರಾಗಿರುವುದರಿಂದ ಇವರು ಅವರೊ

೧. ವಿಕ್ರಮಾರ್ಜುನ ವಿಜಯಂ ದಶಮಾಶ್ವಾಸಂ ಪ-೧೭, ಪು. ೨೬೨
೨. ,, ,, ಪ- ೧೮, ಪು. ೨೬೨

ಡನೆ ಕಾದಲಾರರು. ಅರಸನೇ ಇವರನ್ನು ಎಂತು ನಂಬುವೆ?" ಎಂದು ಕರ್ಣನು ಪ್ರಶ್ನಿಸಲಾಗಿ ಅದಕ್ಕೆ ಸಿಡಿಲ್ದು ದ್ರೋಣರು ಇಂತೆಂದರು:

ಸಿಂಗದ ಮುಪ್ಪುಂ ನೆಗೞ್ದೀ ।
ಗಾಂಗೇಯರ ಮುಪ್ಪು ಮಿೞ್ಕೆ ವಡೆಗುಮೆ ವನಮಾ।
ತಂಗಂಗಳಿನಸು ಹೃಚ್ಛತು ।
ರಂಗ ಬಲಂಗಳಿನದೆಂತು ಮಂಗಾಧಿಪತೀ[1]॥

ಕುಲಜರನುದ್ಧತರಂ ಭುಜ
ಬಲಯುತರಂ ಹಿತರನೀ ಸಭಾ ಮಧ್ಯದೊಳ।
ಗ್ಗಲಿಸಿದ ಮದದಿಂ ನಾಲಗೆ।
ಕುಲಮಂ ತಬ್ಬುವವೊಲುಱದೆ ನೀಂ ಕೆಡೆನುಡಿವೈ[2]॥

ಕಾಡಾನೆಗಳಿಂದ ಸಿಂಹದ ಮುದಿತನವೂ, ಶತ್ರುಗಳ ಚತುರಂಗ ಸೈನ್ಯಗಳಿಂದ ಪ್ರಸಿದ್ಧರಾದ ಈ ಗಾಂಗೇಯರ ಮುದಿತನವೂ ಕರ್ಣನೇ ತಿರಸ್ಕೃತವಾಗುವುದೆ?

"ಸತ್ಕುಲಜರನ್ನು, ಘನತೆಯುಳ್ಳವರನ್ನು, ಶೂರರನ್ನು ಸರ್ವರಿಗೂ ಬೇಕಾದವರನ್ನು, ಈ ಸಭೆಯ ನಡುವೆ ಅಧಿಕವಾದ ಕೊಬ್ಬಿನಿಂದ ಹೀಯಾಳಿಸಿ ಮಾತನಾಡಿದುದು ನಿನ್ನ ಕುಲವನ್ನು ಸೂಚಿಸುವುದು." ಎಂದು ಕಟಕಿಯಾಡಿದ

೧. ವಿಕ್ರಮಾರ್ಜುನ ವಿಜಯಂ ದಶಮಾಶ್ವಾಸಂ ಪ. ೧೯, ಪು. ೨೬೩
೨. ,, ,, ,, ೨೦ ,,

ಪ್ರ. ಸಂ। ಡಾ। ಕೆ. ವಿ. ಪುಟ್ಟಪ್ಪ, ಎಂ. ಎ., ಡಿ. ಲಿಟ್

ದ್ರೋಣರ ಮಾತಿಗೆ ಮುಳಿದು ಕರ್ಣನು...... "ನಿಮ್ಮ ಕುಲವನ್ನೇನು ಕೂಗಿ ಹೇಳುವಿರಿ ಹುಟ್ಟಿದ ಕುಲವು ನಿಜವಾದ ಕುಲವಲ್ಲ. ಅಭಿಮಾನ, ಛಲವೊಂದೇಕುಲ. ನಿಮ್ಮ ಕುಲವು ಈ ಯುದ್ಧದಲ್ಲಿ ನಿಮಗೆ ದುಃಖವನ್ನುಂಟು ಮಾಡುವದು.

ಗಂಗಾ ಸುತಂ ಪೃಥಾಸುತ।
ರಂ ಗೆಲ್ದೊಡೆ ತಪಕೆ ಪೋಪೆನವರ್ಗಳ ಕೆಯ್ಯೊಳ್ ॥
ಗಾಂಗೇಯು ನಱಿದೊಡಹಿತರ।
ಗಾಂಗೇಯು ನಱಿದೊಡಹಿತರ।
ನಾಂಗೆಲೆ ತಳ್ತಿಱಿವೆನನ್ನೆಗಂ ಬಿಲ್ವಡಿಯಂ॥

"ಭೀಷ್ಮನು ಪಾಂಡವರನ್ನು ಗೆದ್ದರೆ ತಪಸ್ಸಿಗೆ ಹೋಗುವೆನು. ಆ ಪಾಂಡವರ ಕೈಯಲ್ಲಿ ಗಾಂಗೇಯನು ನಾಶವಾದರೆ ವೈರಿಗಳನ್ನು ಬೆನ್ನಟ್ಟಿ ಅವರೊಡನೆ ಯುದ್ಧ ಮಾಡುವೆನು. ಅದುವರೆಗೂ ಬಿಲ್ಲನ್ನು ಹಿಡಿಯುವದಿಲ್ಲ"ವೆಂದು ಕರ್ಣನು ಪ್ರತಿಜ್ಞೆ ಮಾಡುವನು. ಆಗ ಸಿಂಧುತನಯನಿಂತೆದನು—

ಕಲಿತನದುರ್ಕು ಜವ್ವನದ ಸೊರ್ಕು ನಿಜೇಶನ ನಚ್ಚು ಮಿಕ್ಕ ತೋ।
ಳ್ವಲದ ಪೊಡರ್ಪು ಕರ್ಣ ನಿನಗುಳ್ಳನಿತೇನನಗುಂಟೆ ಭಾರತಂ ॥
ಕಲಹ ಮಿದಿರ್ಚುವಂ ಹರಿಗನಪ್ಪೊಡೆ ಪೊಕ್ಕಳವೇಕೆ ನೀಂ ಪಳಂ।

೧. ವಿಕ್ರಮಾರ್ಜುನ ವಿಜಯಂ ದಶಮಾಶ್ವಾಸಂ ಪ-೨೨, ಪುಟ. ೨೬೩
ಪ್ರ. ಸಂ. ಡಾ. ಕೆ. ಎ. ಪುಟ್ಟಪ್ಪ ಎಂ. ಎ., ಡಿ. ಲಿಟ್

ಜಲದಪೆಯಣ್ಣ ಸೂಟಿಪ್ಪೆಡೆಯಲಪ್ಪುದು ಕಾಣ
ಮಹಾಜಿರಂಗದೊಳ್[೧]||

"ಶೌರ್ಯದ ಗರ್ವ, ಯೌವನದ ಮದ, ನಿನ್ನ ಒಡೆಯನ ನಂಬಿಕೆ, ಅತಿಶಯವಾದ ಭುಜಬಲದ ಸ್ಫುರಣೆ, ಕರ್ಣನೇ ನಿನಗಿರುವಷ್ಟು ನನಗಿದೆಯೆ ? ಭಾರತ ಯುದ್ಧವು ಸಾಮಾನ್ಯವಾದುದಲ್ಲ. ಎದುರಿಸುವ ಅರ್ಜುನನಿರುವನು. ನೀನು ಏಕೆ ಪೀಡಿಸುತ್ತಿರುವಿ ? ಮಹಾಯುದ್ಧರಂಗದಲ್ಲಿ ಸರದಿಯನ್ನು ಪಡೆಯಲಾಗುತ್ತದೆ" ಎಂದು ಹೇಳುವಲ್ಲಿ ಸುಂದರವಾದ ನಾಟಕೀಯತೆಯಿಂದೆ. ಮಾತಿಗೆ ತಕ್ಕ ಪ್ರತ್ಯುತ್ತರವಾಗಿದೆ. ಶೌರ್ಯ, ಗರ್ವ, ಪ್ರಭುವಿನ ನಂಬಿಕೆಯಿಂದ ಕೊಬ್ಬೇರಿದ ಕರ್ಣನಿಗೆ, ತಾನೇ ಅತ್ಯಂತ ಪರಾಕ್ರಮಿ, ತನಗೆ ಶೌರ್ಯದಲ್ಲಿ ಇದಿರಿಲ್ಲವೆಂಬುವ ಅಹಂಭಾವವು ಹೆಚ್ಚಾಗಿರುವದು. ಸದ್ವಂಶಜರೂ, ಮಹಾಪರಾಕ್ರಮಿಗಳೂ ಆದ ಕುರುಪಿತಾಮಹರನ್ನು ಕೆಡ ನುಡಿದ ಕರ್ಣನು ಅದರ ಯೋಗ್ಯತೆಯನ್ನು ಪರಿಪೂರ್ಣವಾಗಿ ಅರಿತಂತೆ ಕಾಣುವದಿಲ್ಲ. ನಿಜವಾಗಿಯೂ ಕುರುಪಾಂಡವರ ಸೈನ್ಯದಲ್ಲಿ ಅರ್ಜುನನ ಹೊರತಾಗಿ ಗಾಂಗೇಯನಿಗೆ ಸಮಾನ–ಬಲನಾದ ವೀರನು ಸಿಗುವದು ದುಸ್ಸಾಧ್ಯವಾಗಿತ್ತು ಇಂಥ ಅತ್ಯಂತ ಪರಾಕ್ರಮಿಗಳನ್ನು ನಿಂದಿಸಿದ ಕರ್ಣನಿಗೆ-

ಮುದುಪರ ಬಿಲ್ಬಲ್ಮೆಯುಮಿಱಿ |
ವದಟುಂ ಬಗೆವಾಗಳಣ್ಣನೆಂದಂ ತುಟಿ ತ ||

೧. ವಿಕ್ರಮಾರ್ಜುನ ವಿಜಯಂ- ದಶಮಾಶ್ವಾಸಂ ಪ. ೨೨, ಪು. ೨೬೪
ಪ್ರ. ಸಂ. ಡಾ. ಕೆ. ವಿ. ಪುಟ್ಟಪ್ಪ ಎಂ. ಎ.,ಡಿ. ಲಿಟ್

ಪ್ಪುದು ಕರಮೆ ತುಚ್ಛ ಮುಕ್ಕುಂ।
ಕದನದೊಳಿನ್ನೆನ್ನ ನುಡಿದ ನುಡಿಯುಂ ಕೇಳಿಂ[೧] ||

ಎಂದು ನುಡಿಯುವ ಗಾಂಗೇಯನ ಮಾತಿನಲ್ಲಿ ಎಂಥ ಕೆಚ್ಚಿದೆಯೆಂಬುದು ಕಂಡುಬರುವದು. ಭೀಷ್ಮ ಕರ್ಣರ ಸಂವಾದದಲ್ಲಿ ಸುಂದರವಾದ ನಾಟಕೀಯತೆ. ಆ ಪದ್ಯಗಳನ್ನು ಅದೇ ರೀತಿಯಾಗಿಟ್ಟರೂ ನಾಟಕೀಯತೆಗೆ ಮೆರಗು ಬರುವುದು.

ವಿಕ್ರಮಾರ್ಜುನ ವಿಜಯದ ತುಂಬೆಲ್ಲ ನಾಟಕೀಯತೆಯು ಕಂಡುಬರುವುದು. ಭೀಮ-ದುಃಶಾಸನರ ಕಾಳಗ, ಭೀಮ-ದುರ್ಯೋಧನರ ಗದಾಯುದ್ಧ, ವಿಕ್ರಮಾರ್ಜುನನ ಯುದ್ಧ ಮುಂತಾದ ಅನೇಕ ಸಂದರ್ಭಗಳಲ್ಲಿ ನಾಟಕೀಯತೆಯು ಸುಂದರವಾಗಿ ನಿರೂಪಿತವಾಗಿದೆ. ಅವೆಲ್ಲ ಸನ್ನಿವೇಶಗಳನ್ನು ಈ ಕಿರುಹೊತ್ತಿಗೆಯಲ್ಲಿ ವಿಮರ್ಶಿಸುವದು ಸಾಧ್ಯವಿಲ್ಲವಾದುದರಿಂದ ಒಂದೆರಡು ಸನ್ನಿವೇಶಗಳಲ್ಲಿ ಬರುವ ನಾಟಕೀಯತೆಯನ್ನು ಮಾತ್ರ ವಿಮರ್ಶಿಸಲಾಗಿದೆ.

## ೨. ಮಹಾ ಕವಿ ರನ್ನನ ಗದಾಯುದ್ಧದಲ್ಲಿಯ ನಾಟಕೀಯತೆ :

ಮಹಾಕವಿ ರನ್ನ ಕನ್ನಡದ ಅನರ್ಘ್ಯರತ್ನ ಕನ್ನಡದ ಹಿರಿಯ ಆಸ್ತಿ, ಪಂಪ, ಪೊನ್ನರ ಜೊತೆಗೆ ಅವನು ಕನ್ನಡದ ಸೀಮಾ ಪುರುಷರಲ್ಲೊಬ್ಬ. ರನ್ನನು 'ಅಚಿತನಾಥ ಪುರಾಣ'

೧. ವಿಕ್ರಮಾರ್ಜುನ ವಿಜಯಂ ದಶಮಾಶ್ವಾಸಂ ಪ. ೨೪, ಪು. ೨೬೪
ಪ್ರ. ಸಂ. ಡಾ. ಕೆ. ವಿ. ಪುಟ್ಟಪ್ಪ ಎಂ. ಎ., ಡಿ.ಲಿಟ್.

'ಗದಾಯುದ್ಧ' ಎಂಬೆರಡು ಕೃತಿಗಳನ್ನು ರಚಿಸಿ ಆದರ್ಶಪ್ರಾಯನಾಗಿರುವನು. ಗದಾಯುದ್ಧವು ಅತ್ಯಂತ ಆಕರ್ಷಕವಾದ ಕಾವ್ಯ. ಇದು ಗಾತ್ರದಲ್ಲಿ ಸಣ್ಣದಾಗಿದ್ದರೂ ಅಲ್ಲಿ ಮೂಡಿ ಬಂದ ಕವಿಯ ವ್ಯಕ್ತಿತ್ವ, ಕಾವ್ಯ ಕಲ್ಪನೆ, ಕಥಾ ಸೌಂದರ್ಯ, ನಾಟಕೀಯತೆ, ಆದರ್ಶ ಪಾತ್ರಸೃಷ್ಟಿ, ಅದ್ಭುತವಾದ ಕಾವ್ಯಶೈಲಿ, ಕಾವ್ಯ ಸಂದೇಶಗಳು ಗದಾಯುದ್ಧಕ್ಕೆ ಅಪೂರ್ವವಾದ ಕಳೆಯನ್ನಿತ್ತಿರುವುವು.

ಪ್ರಾಚೀನ ಕನ್ನಡ ಕವಿಗಳಲ್ಲಿ ಅನೇಕರು ಅಷ್ಟಾದಶ ವರ್ಣನೆಗಳ ಕಟ್ಟಿಗೆ ಬಿದ್ದು ತಮ್ಮ ಕಾವ್ಯಗಳನ್ನು ಅನಾವಶ್ಯಕವಾಗಿ ಹಿಗ್ಗಲಿಸುತ್ತ ಹೋದುದು ಕಂಡುಬರುವದು. ಮಹಾಭಾರತ ಗದಾಸೌಪ್ತಿಕ ಪರ್ವಗಳಿಂದ ಆಯ್ದುಕೊಂಡ ತನ್ನ ಕಥಾಭಾಗಕ್ಕೆ ಉಚಿತವಾಗುವಷ್ಟೇ ಗದಾಯುದ್ಧ ಕಾವ್ಯವನ್ನು ರನ್ನನು ವಿಸ್ತರಿಸಿದ್ದಾನೆ. ಪೂರ್ವಸಂದರ್ಭಗಳನ್ನೆಲ್ಲ ಕೇವಲ ಸಿಂಹಾವಲೋಕನ ಕ್ರಮದಿಂದ ಹೇಳಿ ಕಾವ್ಯಕ್ಕೊಂದು ಅಪೂರ್ವ ಮೆರಗನ್ನು ತಂದುಕೊಟ್ಟಿದ್ದಾನೆ.[೧]

ನಾಟಕೀಯ ಪ್ರತಿಭೆಯಲ್ಲಿ ಅಗ್ರಗಣ್ಯರಾದ ಕವಿಗಳು ಕನ್ನಡ ಸಾಹಿತ್ಯದಲ್ಲಿ ರನ್ನ ಮತ್ತು ರಾಘವಾಂಕರೆಂದು ಹೇಳಬಹುದು. ರನ್ನನ ಗದಾಯುದ್ಧದಲ್ಲಿ ಬರುವ ನಾಟಕೀಯತೆಯನ್ನು ಕುರಿತು ವಿಚಾರಿಸುವಾ.

---

೧. ಮಹಾಕವಿ ರನ್ನ ಹಾಗೂ ಅವನ ಕೃತಿಗಳು, ರನ್ನನ ಗದಾಯುದ್ಧ ಪ್ರಿ. ಡಾ. ಆರ್. ವಾಯ್ ಧಾರವಾಡಕರ ಎಂ. ಎ., ಪಿಎಚ್.ಡಿ.

ಗದಾಯುದ್ಧವು ಹತ್ತು ಆಶ್ವಾಸಗಳನ್ನೊಳಗೊಂಡ ಖಂಡ ಕಾವ್ಯ. ಇದರ ವಸ್ತು ಕೇವಲ ಒಂದುವರೆ ದಿನಗಳ ಅವಧಿಯಲ್ಲಿ ನಡೆದ ಘಟನೆ. ಮೂಲ ಘಟನೆ ಘಟಿಸಿದುದು ಕುರುಕ್ಷೇತ್ರ ಯುದ್ಧಭೂಮಿಯಲ್ಲಿ. ಅಲ್ಲಿರುವ ಕ್ರಿಯೆಗಳೆಲ್ಲ ಗದಾಯುದ್ಧ, ಸುಯೋಧನನ ಊರುಭಂಗ ಮುಂತಾದವುಗಳಿಗೆ ಪೋಷಕವಾಗಿವೆ.

ಮಹಾಭಾರತ ಯುದ್ಧದ ಮೂಲ ಕಾರಣ ಪಾಂಚಾಲಿಗಾದ ಅಪಮಾನ, ಅವಳ ಅಪಮಾನದ ಪ್ರತಿಕಾರದ ಸೇಡಿನ ಛಲ ಭೀಮಸೇನನಲ್ಲಿದ್ದುದೇ ಗದಾಯುದ್ಧದ ಘಟನೆಗೆ ಪ್ರೇರಕಗಳಾಗಿವೆ. ಸಿಂಧುಪುತ್ರ ಧೃತರಾಷ್ಟ್ರರು ಧರ್ಮಜನ ಮನಸ್ಸನ್ನು ಪರಿವರ್ತಿಸಿದರೆ, ಅವನು ಸಂಧಿಗೆ ಒಡಂಬಡಬಹುದೆಂದು ಸಂದೇಹವು ದ್ರುಪದ ಕುಮಾರಿಗಾಗುವುದು. ಇದನ್ನು ಕಳೆಯಬೇಕೆಂದು ಭೀಮಸೇನನಲ್ಲಿ ಮೊರೆಯಿಡುವಳು ಆಗ ಭೀಮನು...

ಗಳಿಯಿಸುತಿರೆ ಕಬರಿ ಭರಂ ।
ಗಳಿಯಿಸುತಿರೆ ನಯನವಾರಿ ನಿನ್ನಾನನದಿಂ ॥
ನಳಿನಾನನೆ ನೀನಿರೆ ಕುರು ।
ಕುಳಾಂತಕಂ ಗಳಿತ ಕೋಪನೇ ಕಲಿಭೀಮಂ[1]॥

ದ್ರೌಪದಿಗೇ ಮರುಸವಾಲು ಹಾಕಿ ಅವಳನ್ನು ಭೀಮನು ಸಮಾಧಾನ ಪಡಿಸಿ ಕಳಿಸುವನು.

---

೧. ಗದಾಯುದ್ಧಂ ಪ್ರಥಮಾಶ್ವಾಸಂ ಪ. ೬೨ (೬೩) ಪು. ೧೧
ಸಂ. ಎಂ.ಎ. ರಾಮಾನುಜೈಯ್ಯಂಗಾರ

## ೫. ಸಂಜಯ ದುರ್ಯೋಧನರು ರಣರಂಗದಲ್ಲಿ ನಡೆಯಿಸಿದ ಸಂವಾದ :

ಹನ್ನೊಂದು ಅಕ್ಷೋಹಿಣಿ ಸೈನ್ಯವನ್ನೂ, ನೂರು ಜನ ಸಹೋದರರನ್ನೂ, ನೂರು ಜನ ಮಕ್ಕಳನ್ನೂ ಕಳೆದುಕೊಂಡು ಏಕಾಕಿಯಾಗಿ ರಣಾಂಗಣದಲ್ಲಿ ಅಲೆಯುವ ದುರ್ಯೋಧನ ನನ್ನು ಆತನ ತಂದೆ ತಾಯಿಗಳ ಬಳಿಗೆ ಕರೆದುಕೊಂಡು ಹೋಗಿ, ಪಾಂಡವರೊಡನೆ ಸಂಧಿಯನ್ನು ಮಾಡಿಸ ಬೇಕೆಂಬುದೇ ಸಂಜಯನ ಹಂಬಲ. ಪಾಂಡವರ ಪರಾಕ್ರಮ ವನ್ನು ವರ್ಣಿಸುವನು.

ಸಂಜಯ—

ಪವನ ಸುತಂ ಗದೆಗೊಳೆ ಗಾಂ |
ಡಿವಿ ಬಿಲ್ಗೊಳೆ ಕೆಯ್ದುಗೊಳ್ವ ಮಾರ್ಕೊಳ್ವಧಟರ್ ||
ಭುವನದೊಳಿಲ್ಲ ವರ್ಗಳ ಬಾ |
ಹು ವಿಕ್ರಮಂ ನಿನಗೆ ಪೊಸತೆ ಕೌರವ ರಾಜಾ[1] ||

ದುರ್ಯೋಧನ—

ಒಡವುಟ್ಟಿದರಂ ಕೊಂದವ |
ರಡಗಂ ತಿಂದವರ ನೆತ್ತರಂ ಬೆಸಲಗೆಯೊಳ್ ||
ಕುಡಿವೀ ನಿಸ್ತ್ರಿಂಶತೆಯಿಂ |
ಹಿಡಿಂಬೆಯಂ ಪೊರ್ದಿ ಕಲ್ತನಾಗನೆ ಭೀಮಂ[2] ||
ಗುರುವಂ ದ್ವಿಜನ್ಮನಂ ಸುತ |
ವಿರಹಾಗ್ನಿ ಗ್ರಸ್ತನಂ ನಿರಾಯುಧನಂ ಸಂ ||

೧. ಗದಾಯುದ್ಧಂ ತೃತೀಯಾಶ್ವಾಸಂ ಪ. ೧೬, ಪು. ೨೭
೨. ,, ,, ಪ. ೨೮, ಪು. ೨೯

ಹರಿಸಿದ ಶಕ್ರಸುತಂಗಾ।
ಗುರು ವಧವೆ ಯಶೋವಧಕ್ಕೆ ಕಾರಣಮಾತ್ತೀ[೧]॥

ಸಂಜಯನು ಪಾಂಡವರ ಪರಾಕ್ರಮವನ್ನೂ, ಅದ್ಭುತ ಸಾಹಸವನ್ನೂ ವರ್ಣಿಸುವನು. 'ಭೀಮಾರ್ಜುನರಿಗೆ ಸಮ ಬಲರನ್ನು ಕಾಣೆ'ನೆಂಬುದು ಸಂಜಯನ ಅಭಿಮತ. ಆಗ ದುರ್ಯೋಧನನು ಅವರನ್ನು ಹೀನಾಯವಾಗಿ ತೆಗಳುವನು. ಅರ್ಜುನನು ಗಂಡು ತೊಟ್ಟಾದುದನ್ನೂ, ಮತ್ಸ್ಯನ ನಿವಾಸದಲ್ಲಿ ನಟನಾದುದನ್ನೂ ನೆನಪಿಗೆ ತಂದು ಹೀಯಾಳಿಸು ವನು. ಭೀಷ್ಮ, ದ್ರೋಣ, ಕರ್ಣರೊಡನೆ ಪಾರ್ಥನು ಅಧರ್ಮ ಯುದ್ಧಮಾಡಿದನೆಂದು ಸುಯೋಧನನು ನಿಂದಿಸುವನು. 'ಗುರುವಿನ ವಧೆಯೇ ಶಕ್ರಸುತಂಗೆ ಯಶೋ ವಧೆ' ಎಂದು ಖಡಾಖಂಡಿತವಾಗಿ ನುಡಿಯುವನು.

ಧರ್ಮರಾಜನ ಬಗೆಗೆ ಸಂಜಯನಿಗೆ ಆದರ ಭಾವವುಂಟು.

ಯಮರಾಜಂ ತಂದೆ ಭೋಜ ಪ್ರಭವೆ ತನಗೆ
ತಾಯ್ಮೈಯ್ದುನಂ ವಾಸುದೇವಂ।
ಸಮರ ಕ್ರೀಡಾರ್ಥದಭ್ಯರ್ಥನೆಯ ಮಳನುಜರ್ಸಂದ
ಭೀಮಾರ್ಜುನರ್ಕೋ
ಪಮವಂದ್ಯಂ ಚಾಪವಿದ್ಯಾಗುರು ಕಳಶಜನೆಂದಂದು
ಸಾಮಾನ್ಯವಲ್ಲಂ।
ಹಿಮ ಕೃದ್ವಂಶಾವತಾರಂ ಭರತಕುಲ ಶಿರಶ್ಶೇಖರಂ
ಧರ್ಮಪುತ್ರಂ[೨]॥

೧. ಗದಾಯುದ್ಧಂ ತೃತೀಯಾಶ್ವಾಸಂ ಪ. ೩೧, ಪು. ೨೯
೨. ,, ,, ಪ. ೧೮, ಪು. ೨೭
ಸಂ. ಎಂ. ಎ. ರಾಮಾನುಜೈಯ್ಯಂಗಾರ

ದುರ್ಯೋಧನ-

ಸ್ಥಿರ ಸತ್ಯವ್ರತಿಯೆಂದು ಧರ್ಮರುಚಿಯೆಂದಾ
ಧರ್ಮಪುತ್ರಂ ದಯಾ।
ಪರನೆಂದೆಲ್ಲರ ಪೇೞ್ದ ಮಾತು ಪುಸಿಯಾಯ್ತೀಕಾರ್ಯ
ಕಾಚಾರ್ಯನಂ॥
ಗುರುವಂ ಬ್ರಾಹ್ಮಣನಂ ತೊದಳ್ನುಡಿದು ಕೊಂದಾಗಳ್
ಮೃಷಾಪಾತಕಂ।
ಪರಮೆಂಬೀ ನುಡಿಯಿಂ ಪೃಥಾ ಪ್ರಿಯಸುತಂ
ಪಾಪಕ್ಕೆ ಪಕ್ಕಾಗನೇ೧॥

ಸಂಜಯನು ಧರ್ಮರಾಜನನ್ನು ಹೊಗಳಿದರೆ, ದುರ್ಯೋಧನನು 'ಧರ್ಮದಲ್ಲಿ ಆಸಕ್ತಿಯುಳ್ಳವನೆಂದು ಎಲ್ಲರೂ ಧರ್ಮರಾಜನಿಗೆ ಹೇಳುತ್ತಿದ್ದರು. ಅವನು ಸುಳ್ಳುಹೇಳಿ ಮಹಾಪಾತಕಕ್ಕೆ ಗುರಿಯಾಗಲಿಲ್ಲವೇ?' ಎಂದು ಪ್ರಶ್ನಿಸುವಲ್ಲಿ ಧರ್ಮರಾಯನು ಮಹಾ ಅಪರಾಧಿಯಾಗಿ ಕಾಣವನು.

ದುಶ್ಶಾಸನನು ಕೃಷ್ಣೆಯ ಕೇಶಗಳನ್ನು ಹಿಡಿದೆಳೆದುದನ್ನು ಸಂಜಯನು ಸಹಿಸುವುದಿಲ್ಲ.

ಸಂಜಯ-

ಅತಿ ಲಜ್ಜಾನ್ವಿತನಾ ನದೀಜನಧಿಕ ಕ್ರೋಧಾವಹಂ
ದ್ರೋಣನು।
ದ್ಧತಕೌರವ್ಯ ಕೃತಾಟ್ಟಹಾಸಮುಸುಹೃದ್ವೀರಾವ
ತಾರಂ ಪೃಥಾ॥

೧. ಗದಾಯುದ್ಧಂ ತೃತೀಯಾಶ್ವಾಸಂ ಪ. ೨೩, ಪು. ೨೮
ಸಂ. ಎಂ. ಎ. ರಾಮಾನುಜೈಯಂಗಾರ

ಸುತರಾರೋಪಿತಚಾಪರುದ್ಧತರುಮಾಗಾಂಡೀ
ವಿಯುಂ ಭೀಮನುಂ ।
ಪತಿಗಳ್ನೋಟಿಪ್ಪನಮಾಯ್ತು ನಿನ್ನನುಜನಿಂ
ಕೃಷ್ಣಾಂಬರಾಕರ್ಷಣಂ[1]॥

ದುರ್ಯೋಧನ-
ವನಿತೆಯ ಕೇಶಮುಂ ಸಭೆಯೊಳೆನ್ನನುಜಂ
ತೆಗೆವಲ್ಲಿ ಗಂಡನಾ ।
ಗನೆ ಭಗದತ್ತನಾನೆ.....
ಕುರುಬಾಲ ಸಂಹರಣ ಮಾತ್ರದೆ ಮಾರುತಿ
ಗಂಡನಾದನೇ...[2]॥

ಸಂಜಯನ ದೃಷ್ಟಿಯಲ್ಲಿ ದುಶ್ಶಾಸನನು 'ಕೃಷ್ಣಾಂಬರ ಕರ್ಷಣಂ' ಮಾಡಿ ಅಪರಾಧಿಯಾದರೆ, ದುರ್ಯೋಧನನು ಅದನ್ನು ಸಮರ್ಥಿಸುತ್ತಾನೆ. ವೀರರಾದ ಪಾಂಡವರು ಅದ ರಲ್ಲಿಯೂ ಭೀಮನು ಮೌನದಿಂದ ಇದ್ದುದನ್ನು ಹಾಗೂ 'ಈಗ ಕುರುಬಾಲ ಸಂಹರಣ ಮಾತ್ರದಿಂದ ಗಂಡನಾದನೆ' ಎಂದು ಕೇಳುವಲ್ಲಿ ದುರ್ಯೋಧನನು ತನ್ನ ಕೃತಿಯನ್ನು ಸಮರ್ಥಿಸಿಕೊಂಡು ಕುಂತಿಯನ್ನೂ ನಿಂದಿಸುವನು.

ಪಸೆಯೊಳ್ಪ ಸುರ್ವಂದರೊಳ।
ಗ್ನಿ ಸಾಕ್ಷಿಯೊಳ್ಕೊಂಡ ಪಾಂಡುಪತಿಯಿರೆ ದೋಷಾ॥

---

೧. ಗದಾಯುದ್ಧಂ ತೃತೀಯಾಶ್ವಾಸಂ ಪ. ೨೨, ಪು. ೨೮
೨. ,, ,, ಪ. ೨೭, ಪು. ೨೯
ಸಂ. ಎಂ. ಎ. ರಾಮಾನುಜೈಯಂಗಾರ

ವಸ ಧರ್ಪಾಡರದಿಂ ಜನಿ|
ಯಿಸಿದರ್ಪಾಂಡವರೊಳಲ್ಲದೆವ್ರೊಳುವುಂಟೇ೧||

ಎಂದು ಕುಂತೀದೇವಿಯನ್ನು ಕೀಳಾಗಿ ಪರಿಗಣಿಸಿ, ಆಕೆಗೆ ಹಾದರದ ಅಪವಾದವನ್ನು ಹೊರಿಸುವಲ್ಲಿ ದುರ್ಯೋಧನನು ತನ್ನ ಆಸುರೀ ಸಂಸ್ಕಾರವನ್ನು ವ್ಯಕ್ತಪಡಿಸುವನು.

**ಬ. ಗುರು–ಬಂಧು–ಮಿತ್ರರ ಸಂದರ್ಶನ :**

ಗದಾಯುದ್ಧವೊಂದು ಮಾನಸಿಕ ಹೋರಾಟ ಮಾನವನ ಮನಸ್ಸಿನ ವಿವಿಧ ತರಂಗಗಳನ್ನು ಮಹಾ ಕವಿ ರನ್ನನು ಈ ಕಾವ್ಯದಲ್ಲಿ ಬಹುಸೂಕ್ಷ್ಮವಾಗಿ ವಿಶ್ಲೇಷಣ ಮಾಡಿದ್ದಾನೆ. ಕೋಪ-ಆಟೋಪಗಳ, ಉಗ್ರ-ವ್ಯಗ್ರ ಸ್ವರೂಪದ ಸುಯೋಧನನನ್ನು ನಮ್ಮೆದುರು ತಂದಿರಿಸಿರುವನು. ಮಾನವನು ಸನ್ನಿವೇಶಗಳ ಪಡಿದೊತ್ತು. ಅವು ಆತನನ್ನು ಅರಗಿಸಿ, ಕರಗಿಸಿ ಕೊರಗಿಸಿ, ಹಣ್ಣು, ನೀರು ಮಾಡಿ ಬಿಡುತ್ತವೆ. ನಾಲ್ಕುತಾಸುಗಳ ಆವಧಿಯಲ್ಲಿ ಹತ್ತೆಂಟು ಪರಸ್ಪರ ವಿಪರೀತವಾದ ಸನ್ನಿವೇಶಗಳು ಸಂಪ್ರಾಪ್ತವಾಗುತ್ತವೆ. ಅವುಗಳ ಫಲವಾಗಿ ಅವನು ವಿನಮ್ರನಾಗಿದ್ದಾನೆ. ತನ್ನ ಸೋಲಿಗೆಲ್ಲ ಅನ್ಯರೇ ಕಾರಣರೆಂದು ಸಾರಿದ ಆತನು ಈಗ ತನ್ನ ತಪ್ಪನ್ನೂ, ವಿಧಿವಿಲಸನ ಲೀಲೆಯನ್ನೂ ಒಪ್ಪಿಕೊಳ್ಳುವಷ್ಟು ಅರಿವುಳ್ಳವನಾಗಿದ್ದಾ೨ನೆಂದು ಡಾ. ಆರ್. ಸಿ. ಹಿರೇಮಠರವರು; ದುರ್ಯೋಧನನ

೧. ಗದಾಯುದ್ಧಂ ತೃತೀಯಾಶ್ವಾಸಂ ಪ. ೩೮. ಪು.೩೦
ಸಂ. ಎಂ. ಎ. ರಾಮಾನುಜೈಯಂಗಾರ

೨. ಮಹಾಕವಿ ರನ್ನ ಹಾಗೂ ಅವನ ಕೃತಿಗಳು ರನ್ನನ ಕಾವ್ಯದಲ್ಲಿ ನಾಟಕೀಯತೆ ಪು.೭೩ ಡಾ| ಆರ್.ಸಿ.ಹಿರೇಮಠ ಎಂ.ಎ.,ಪಿಎಚ್.ಡಿ.

ಮನಃ ಪರಿವರ್ತನೆಯನ್ನು ವಿವರಿಸಿದುದು ಯಥಾಯೋಗ್ಯವಾಗಿದೆ. ಸಮರಾಂಗಣದಲ್ಲಿ ಗುರು-ದ್ರೋಣರ ಶವವನ್ನು ಕಂಡೊಡನೆ.........'ಬಿಲ್ಲ ಬಿನ್ನಣಕೆ ಗಾಂಡಿವಿಯಲ್ತು ಪಿನಾಕಪಾಣಿಯುಂ....ನಿಮ್ಮೊಡನೆ ಕಾದಿಗೆಲಲ್ಕದು ನಿಮ್ಮಪೇಕ್ಷೆಯೆಂ॥. . . . ಸಂಭವಿಸಿದುರ್ದೊ ಕುಂಭಸಂಭವಾ'[೧]

ಎಂದು ತನ್ನ ಅನುತಾಪವನ್ನು ವ್ಯಕ್ತಪಡಿಸಿ, ಇಂಥ ವೀರಾಧಿ ವೀರನು ವಿನಾಕಾರಣ ಮರಣವನ್ನಪ್ಪಿರುವುದನ್ನು ನೋಡಿ ಮಮ್ಮಲ ಮರಗುವ ಸುಯೋಧನನ ಅಂತಃಕರಣವನ್ನಿಲ್ಲಿ ಅಳೆಯಬಹುದು. ಗುರುವಿನ ಪರಾಕ್ರಮ ಎಂಥದೆಂಬುದಕೆ......

ಶರ ಸಂಧಾನಮನನ್ಯ ಸೈನ್ಯದೊಡಲೊಳ್ ಬಿಲ್ಬಲ್ಮೆಯುಂ ತನ್ನಶಿ।
ಷ್ಯರ ಮೆಯ್ಯೊಳ್ ನಿಜಕೀರ್ತಿಯುಂ ನಿಖಿಳ ದಿಕ್ಚಕ್ರಂಗಳೊಳ್ ಚಿತ್ರಮುಂ ॥
ಹರ ಪಾದಾಂಬುಜ ಯುಗ್ಮದೊಳ್ ನಿಱಿಸಿದಂ ಚಾಪಾಗಮಾಚಾರ್ಯರೊಳ್।
ದೊರೆಯಾರೆಂಬಿನಮುಣ್ಮೆ ಸತ್ತುಳವಿದೇಂ ದ್ರೋಣಂಗೆ ಮೆಯ್ವೆತ್ತುದೋ ॥[೨]

---

೧. ಗದಾಯುದ್ಧಂ ಚತುರ್ಥಾಶ್ವಾಸಂ ಪ. ೪೯, ಪು. ೫೦
೨. ,, ,, ಪ. ೫೧, ಪು. ೫೧
ಸಂ. ಎಂ. ಎ. ರಾಮಾನುಜೈಯಂಗಾರ

ದ್ರೋಣರ ಮರಣಕ್ಕೆ ತಾನೇ ಕಾರಣವೆಂಬುದನ್ನು ಅರಿತಿರುವನು. ತನ್ನ ಕರ್ಮವಶದಿಂದಲೇ ಈ ಘಟನೆಯುಂಟಾಯಿತೆಂದು ಭಾವಿಸುವನು. ಅವನಿಗೀಗ ಪಶ್ಚಾತ್ತಾಪವಾಗಿದೆ. ಮುಂದೆ ಅವನು ಅಭಿಮನ್ಯುವಿನ ಶವವನ್ನು ಕಂಡು ತನ್ನ ಪ್ರೇಮಾದರವನ್ನೂ ವ್ಯಕ್ತಪಡಿಸುವನು.

ಗುರು ಪಣ್ಣಿದ ಚಕ್ರವ್ಯೂ।
ಹರಚನೆ ಪೆಱರ್ಗರಿದು ಪುಗಲಿದಂ ಪೊಕ್ಕುರಣಾ।
ಜಿರದೊಳರಿ ನೃಪರನಿಕ್ಕಿದ।
ನರಸುತ ನಿನ್ನೊರೆಗೆ ದೊರೆಗೆ ಗಂಡರುಮೊಳರೇ[೧]॥

ಪಲರಿರ್ದು ಕಾದಿದರ್ ಮ।
ಯ್ಯಲಿಗಳ್ ನಿನ್ನೊಂದೆ ಮೆಯ್ಯೊಳಂ ತವೆ ಕೊಂದೈ॥
ಪಲರಂ ನಿನ್ನಂ ಪೆತ್ತಳ್।
ಮೊಲೆವೆತ್ತಳೆ ವೀರಜನನಿ ಪೆಸರಂ ಪೆತ್ತಳ್[೨]॥

ಗದಾಯುದ್ಧದ ಒಂದೊಂದು ಸನ್ನಿವೇಶದಲ್ಲಿ ಕವಿಯು ತನ್ನ ಅಸಾಧಾರಣವಾದ ರಚನಾ ಕೌಶಲ್ಯವನ್ನು ತೋರಿರುವನು. ಈ ಕಾವ್ಯದ ಕೇಂದ್ರ ವ್ಯಕ್ತಿ ದುರ್ಯೋಧನ ಮಿಕ್ಕ ಸನ್ನಿವೇಶ, ಘಟನೆಗಳು ಆ ಪಾತ್ರ ಪೋಷಣೆ ಉದ್ದೀಪನವಾಗಿವೆ.

---

೧. ಗದಾಯುದ್ಧಂ. ಚತುರ್ಥಾಶ್ವಾಸಂ ಪ. ೫೪, ಪು. ೫೧
೨. ,, ,, ಪ. ೬೫, ಪು. ೫೨

ಸಂ. ಎಂ. ಎ. ರಾಮಾನುಜೈಯಂಗಾರ

ದುರ್ಯೋಧನನು ತನ್ನ ಮಗನಾದ ಲಕ್ಷಣ ಕುಮಾರನ ಶವವನ್ನೂ ತಮ್ಮನಾದ ದುಶ್ಯಾಸನನ ಶವವನ್ನೂ ಕಂಡಾಗ ತೋರ್ಪಡಿಸಿದ ದುಃಖವನ್ನು ನೋಡಿ ಪ್ರತಿಯೊಬ್ಬರ ಮನ ಕರಗುವದು.

ಮುಂದೆ ಕರ್ಣನ ಶವವನ್ನು ನೋಡಿ ಸುಯೋಧನನು ಸುರಿಸುವ ಕಣ್ಣೀರು ಕೋಡಿಯೊಡೆದು ಹರಿಯುವದು. ಕರ್ಣನಿದ್ದ ನಾಡಿನಲ್ಲಿ ಅನೃತ, ಲೋಭ, ಭಯಗಳಿಲ್ಲವೆಂದೂ, ಅವನ ಜನನ ವೃತ್ತಾಂತವು ತನಗೆ ಗೊತ್ತಿದ್ದರೂ ರಾಜ್ಯವನ್ನು ಅವನಿಗೆ ಕೊಡಲಿಲ್ಲನೆಂದೂ, ಧರ್ಮ ರಾಜನಿಗೆ ಗೊತ್ತಾಗಿದ್ದರೆ ಸರ್ವಸ್ವನ್ನೇ ಕರ್ಣನಿಗೀಯುತ್ತಿದ್ದನೆಂದೂ ಹೇಳಿ. . . .

ನೀನುಳ್ಳೊಡುಂಟು ರಾಜ್ಯಂ |
ನೀನುಳ್ಳೊಡೆ ಪಟ್ಟಮುಂಟು ಬೆಳ್ಗೊಡೆಯುಂಟೈ ||
ನೀನುಳ್ಳೊಡುಂಟು ಪೀಟಿಗೆ
ನೀನಿಲ್ಲದಿವೆಲ್ಲಮೊಳವೆ ಅಂಗಾಧಿಪತೀ[೧] ||

ಕರ್ಣನನ್ನು ಕಳೆದುಕೊಂಡ ದುರ್ಯೋಧನನು ಜೀವವಿಲ್ಲದ ದೇಹವಾಗಿದ್ದಾನೆ. ಏಕೆಂದರೆ ಅವರೀರ್ವರೂ ಒಡಲೆರಡು ಜೀವವೊಂದಾಗಿ ಬೆಳೆದವರು. ಅಂತಹ ಮಿತ್ರನಳಿವಿನಿಂದ ಅವನಿಗೆ ವಿಶ್ವವೇ ಶೂನ್ಯವಾಗಿರುವುದು. ಅವನಿಲ್ಲದ ಪಟ್ಟ, ಬೆಳ್ಗೊಡೆ, ರಾಜ್ಯ ಎಲ್ಲವೂ ವ್ಯರ್ಥವಾಗಿರುವುವು.

೧. ಗದಾಯುದ್ಧಂ ಪಂಚಮಾಶ್ವಾಸಂ ಪ. ೨೦, ಪು ೫೬
ಸಂ. ಎಂ. ಎ. ರಾಮಾನುಜೈಯಂಗಾರ

ಇಲ್ಲಿ ದುರ್ಯೋಧನನ ಮಿತ್ರತ್ವದ ಉತ್ತುಂಗ ಶಿಖರವನ್ನು ಕವಿಯು ತೋರಿರುವನು.

ದುರ್ಯೋಧನನು ಭೀಷ್ಮರ ಬಳಿಗೆ ಬಂದಾಗ ಶರಪಂಜರದ ಮೇಲೆ ಮಲಗಿದ ಭೀಷ್ಮರನ್ನು ಕಂಡಾಗ ಅವರು ಸಂಧಾನದ ಮಾತೆತ್ತುವರು.

ನೆಲಕಿೞಿವೆನೆಂದು ಬಗೆದಿರೆ।
ಚಲಕಿೞಿವೆಂ ಪಾಂಡುಸುತರೊಳೀ ನೆಲನಿದು ಪಾ॥
ೞ್ನೆಲನೆನಗೆ ದಿನಪಸುತನಂ।
ಕೊಲಿಸಿದ ನೆಲನೊಡನೆ ಮತ್ತೆ ಪುದುವಾಳ್ದಪೆನೇ[1]॥

ಎಂದು ತನ್ನ ಛಲವನ್ನೇ ಮೆರೆಯುವನು. ಭೀಷ್ಮರು ಕೃಪಾಶ್ವತ್ಥಾಮರು ಬರುವವರೆಗೆ ವೈಶಂಪಾಯನ ಸರೋವರ ದಲ್ಲಿ ಮುಳುಗಿ ಕಾಲಕ್ಷೇಪಮಾಡಬೇಕೆಂದು ಹೇಳುವರು. ಇದು ಅವರ ಘನತೆಗೆ ಕುಂದುತಂದಿದೆ.

**೪. ವೈಶಂಪಾಯನ ಸರೋವರ ತೀರದಲ್ಲಿ :**

ಭೀಷ್ಮರ ಉಪದೇಶದಂತೆ ವೈಶಂಪಾಯನನ ಸರೋವರಕ್ಕೆ 'ಪಿಂದು ಪೆಱಗಾಗಿ ಪೊಕ್ಕ' ದುರ್ಯೋಧನನ ಈ ಕೃತಿಯು ಉದಾತ್ತವೆಂದು ಯಾರೂ ಕರೆಯಲಾರರು. ಸರೋವರದ ಪಕ್ಷಿಗಳು ಸಹ ಅವನಿಗೆ ಛೀಃ ಗುಟ್ಟಿದುವು. ಪಾಂಡವರು ಚಾರನ ಮಾತನ್ನು ಕೇಳಿ ಅವನನ್ನು ಹುಡುಕುತ್ತ ವೈಶಂಪಾ

---

೧. ಗದಾಯುದ್ಧಂ ಪಂಚಮಾಶ್ವಾಸಂ ಪ. ೪೭, ಪು. ೬೫
ಸಂ. ಎಂ. ಎ. ರಾಮಾನುಜೈಯಂಗಾರ

ಯುನನ ಸರೋವರಕ್ಕೆ ಬರುವರು. ನಕುಲ-ಸಹದೇವ, ಅರ್ಜುನರ ಮೂದಲಿಕೆಯನ್ನು ದುರ್ಯೋಧನನು ಕೇಳಿಯೂ ಹೊರಗೆ ಬರುವುದಿಲ್ಲ. ಧರ್ಮರಾಯನು ಶಾಂತ ವಾಗಿಯೇ ಇಂಥ ಸಂದರ್ಭದಲ್ಲಿಯೂ ಸಂಧಿಗೊಡಂಬಡು ಎಂದು ಹೇಳುವನು. ಅವನ ಉಪದೇಶವೂ ಸುಯೋಧನನಿಗೆ ರುಚಿಸಲಿಲ್ಲ. ಆಗ ಭೀಮನು ಆಟೋಪದಿಂದ " ಈ ಬೂತೆನ್ನ ಸರಂಗೇಳ್ದೊಡಲ್ಲದೆ ಪೊಱಮಡುವನಲ್ಲನಿವಂಗಾನೆಂದು' ಆರ್ಭಟಿಸುತ್ತ ತನ್ನ ಗದೆಯಿಂದ ಆ ಸರೋವರದ ನೀರನ್ನು ಕಲಕುವನು. ಭೀಮನ ರವವು ಎಂಥದೆಂಬುದಕೆ........

ಆ ರವಮಂ ನಿರ್ಜಿತ ಕಂ।
ಠೀರವರವಮಂ ನಿರಸ್ತ ಘನರವಮಂ ಕೋ ॥
ಪಾರುಣ ನೇತ್ರಂ ಕೇಳ್ದಾ।
ನೀರೊಳಗಿರ್ದುಂ ಬೆಮರ್ತನುರಗಪತಾಕಂ[೧]॥

ಇದು ಅಪೂರ್ವವಾದ ಅನುಭವವು. ಸುಯೋಧನನು 'ರಸೆಯಿಂ ಕಾಲಾಗ್ನಿರುದ್ರಂ ಪೊಱಮಡುವವೊಲಂತಾ ಸರೋವರ ಮಧ್ಯದಿಂ' ಬರುವನು. ಯುದ್ಧಕ್ಕೆ ಪಾಂಡವ ರಲ್ಲಿ ಭೀಮನನ್ನೇ ಅವನು ಆರಿಸಿಕೊಳ್ಳುವನು. ಭೀಮನನ್ನು ಕುರಿತು.....

---

೧. ಗದಾಯುದ್ಧಂ ಸಪ್ತಮಾಶ್ವಾಸಂ ಪ. ೨೨, ಪು. ೮೪
ಸಂ. ಎಂ. ಎ. ರಾಮಾನುಜೈಯಂಗಾರ

ಪುಟ್ಟಂ ಸಟ್ಟುಗಮಂ ಕೊಂ।
ಡಟ್ಟುಳಿಸಿ ಜೋನಮಿಟ್ಟು ಬಂದೆಯೊ?[೧]ಗದೆಗೊಂ।

ಎಂದು ಮೂದಲಿಸಿದ ಸುಯೋಧನನಿಗೆ ವಾಯುಸುತನ ಉತ್ತರ:

"ನೆನೆ ಚಿತ್ರಾಂಗದನಿಂದಮಂದು ನಿನಗಾದಾ। ಬನ್ನಮಂ
.....ಕವಲ್ಬನ್ನಂಗಳಂ ಕೌರವಾ[೨]"

೪. ಗದಾಯುದ್ಧ ಪ್ರಾರಂಭ

ಕರಿಯಂ ನುಂಗಿ ಕಳಿಂಗನಂ ನೊಣೆದ ದರ್ಪಕ್ಕೊಂದು
ಗೊಳ್ ಮತ್ಸಹೋ।
ದರರಂ ಕೋಪದೆ ತಿಂದುದರ್ಕೆರಡುಗೊಳ್ ದುಶ್ಶಾಸ
ನೋರಸ್ಥಳ॥
ಕ್ಷರ ದಸ್ರಾಂಬುವನಾರ್ದು ಪೀರ್ದ ಮುಳಿಸಿಂಗಂ
ಮೂಱುಗೊಳ್ಳೆಂದು ಮ।
ಚ್ಚರದಿಂದೋವದೆ ಪೋಯ್ದನೆತ್ತಿ ಗದೆಯಂ
ದುರ್ಯೋಧನಂ ಭೀಮನಂ[೩]॥

ಇದು ಲಾಕ್ಷಾಗೇಹ ದಾಹಕ್ಕಿದು ವಿಷಮ ವಿಷಾನ್ನಕ್ಕಿ
ದಾನಾಡ ಜೂದಿಂ।

---

೧ ಗದಾಯುದ್ಧಂ ಸಪ್ತಮಾಶ್ವಾಸಂ ಪ-೩೬ ಪು-೮೭
೨. ,, ,, ಪ-೩೯ ಪು-೮೭
೩. ,, ಅಷ್ಟಮಾಶ್ವಾಸಂ ಪ-೧೮ ಪು-೯೭

ಸಂ॥ ಎಂ. ಎ. ರಾಮಾನುಜೈಯಂಗಾರ

ಗಿದುಂ ಪಾಂಚಾಲೀ ಪ್ರಪಂಚಕ್ಕಿದು ಕೃತಕ ಸಭಾಳೋಕನ
ಭ್ರಾಂತಿಗೆಂದೋ ||
ವದೆ ಪೊಯ್ದಂ ಕಾಲ್ಗಳಂ ತೋಳ್ಗಳನಗಲ್ದುರವುಂ
ಕೆನ್ನೆಯುಂ ನೆತ್ತಿಯುಂ ಕೋ |
ಪದಿನ್ನೈದುಂ ದುರ್ನಯುಕ್ಕೈದೆಡೆಯುನುರುಗದಾ ದಂಡದಿಂ
ಭೀಮಸೇನಂ[೧]||

ಭೀಮ-ದುರ್ಯೋಧನರು ಪ್ರಕೃತಿಯ ಎರಡು ಶಕ್ತಿಗಳಂತೆ ಗದೆಯಿಂದ ಹೋರಾಡುವರು. ಭೀಮನು ಮೂರ್ಛೆ ಹೋದರೂ ಅವನನ್ನು ಸುಯೋಧನನು ಹೊಡೆಯುವದಿಲ್ಲ. ಪ್ರತಿಯಾಗಿ ಗದೆಯಿಂದ ಗಾಳಿ ಹಾಕುವನು. ತ್ರಿಲೋಕ ಸೂತ್ರಧಾರಿಯಾದ ಕೃಷ್ಣನ ಸಂಜ್ಞೆಯಂತೆ ದುರ್ಯೋಧನನ ತೊಡೆಗಳಿಗೆ ಭೀಮನು ಗದೆಯಿಂದ ಹೊಡೆದು 'ಊರು ಭಂಗ' ಮಾಡುವನು. ಬಲದೇವಾದಿಗಳ ಮಾತನ್ನು ಕಡೆಗಣಿಸಿ ದುರ್ಯೋಧನನ 'ಮುಕುಟಭಂಗ' ಮಾಡುವನು. ಇಂತು ತನ್ನ ಪ್ರತಿಜ್ಞೆಯನ್ನು ಭೀಮಸೇನನು ಪೂರೈಸಿಕೊಂಡು,

ದ್ರೌಪದಿಯನ್ನು ಕರೆಯಿಸಿಕೊಂಡು ....... 'ಆದಿತ್ಯನ ಸಾರಥಿಯಿರ್ಪಂತೆ ನಿಜೋರುಯುಗಳವಿಕಳನಾಗಿರ್ದ ದುರ್ಯೋಧನನಂ ತೋಱಿ'

ಭೀಮಸೇನ— ಪಗೆ ಮುಡಿದುದು ಮುಡಿಯೆನೆ

---

೧. ಗದಾಯುದ್ಧಂ ಅಷ್ಟಮಾಶ್ವಾಸಂ. ಪ-೧೯ ಪು. ೯೭
ಸಂ|| ಎಂ. ಎ. ರಾಮಾನುಜೈಯಂಗಾರ

ಪಾಂಚಾಲಿ— ನಗೆ ಮೊಗದಿಂ ಮುಱಿದೆನಾಂ ಪಲಕಾಲಂ|
ವಿಗತಾಭ್ಯಾಸದೆ ಸತ್ತಿಗ|
ಪಗೆಯಂ ಮುಡಿಯಿಸಿದೆ ನೀನೆ ಮುಡಿಯಲ್ವೇಟಿಕ್ಕುಂ[೧]||

ಎಂದು ದ್ರೌಪದಿಯು ಹೇಳಿದುದಕ್ಕೆ ಆಕೆಯ ವೇಣೀ ಸಂಹಾರವನ್ನು ತಾನೆ ಮಾಡಿ. . . .

ಭೀಮಸೇನ— ಇದಱೊಳ್ ಮೂರ್ಧಾಭಿಷಿಕ್ತರ್ ಮಣಿಮಕುಟಧರರ್ ಕೃಷ್ಣೆ ಬಾಹಾಬಳಾಗ್ರ್ಯರ್| ಕದನಪ್ರೋಚ್ಚಂಡದಂಡಕ್ರಮವಿಜಿತರಿಪುಕ್ಷತ್ರಿಯರ್ವೀರಲಕ್ಷ್ಮೀ||

ಸದನಸೋರ್ಮಾವೃತಾಸ್ವಾದನರುಚಿವದನರ್
ಮುನ್ನಮುಟ್ಟಾಡಿದರ್ ನೋ|
ಡಿದು ನಿನ್ನೀಕೇಶಪಾಶಂ ಕುರುಕುಲ ಪತಿಗಾಯ್ತಿಲ್ತೆ
ಕಿನಾಶ ಪಾಶಂ[೨]||

ಎಂದು ಪಾಂಚಾಲಿಯನ್ನು ಸಂತೋಷಪಡಿಸುವನು. ಮೇಲೆ ನಿರೂಪಿಸಿದ ಸನ್ನಿವೇಶಗಳಲ್ಲಿ ಸುಂದರವಾದ ನಾಟಕೀಯತೆಯು ಕಂಡು ಬರುವುದು. ಸುಯೋಧನನ ಪಾತ್ರ ಚಿತ್ರದಲ್ಲಿ ಮಹಾಕವಿ ರನ್ನನು ತನ್ನ ನಾಟಕೀಯ ವೈಶಿಷ್ಟ್ಯವನ್ನು ತೋರಿರುವನು. ರನ್ನನು ಉತ್ತಮ ನಾಟಕಕಾರನೆಂಬ ಮಾತು ನಿರ್ವಿವಾದವಾದುದು.

---

೧. ಗದಾಯುದ್ಧಂ. ಅಷ್ಟಮಾಶ್ವಾಸಂ ಪ- ೪೮ ಪು-೧೦೩

೨. ಗದಾಯುದ್ಧಂ ಅಷ್ಟಮಾಶ್ವಾಸಂ ಪ-೪೯ ಪು- ೧೦೪
ಸಂ|| ಎಂ. ಎ. ರಾಮಾನುಜೈಯಂಗಾರ

ಯೆರಡನೆಯದು; 'ಅಖಿಲ ಜೀವಾವಳಿಯಲಿ ಭಾಪಿಪೊಡೆ ಕುಂದನಲ್ಲದೆ ಲೇಸ ಕಾಣದಿಹ ಭಾವ' ಮೂರನೆಯದು; ಹೀಗೆ ಮೂರೂ ಭಾವಗಳು ಮುಪ್ಪುರಿಗೊಂಡ ಅವನ ಚಿತ್ರವನ್ನು ಕವಿಯು ನಮ್ಮೆದುರು ತಂದು ನಿಲ್ಲಿಸುವನು. ವಸಿಷ್ಠ ವಿಶ್ವಾಮಿತ್ರರ ಸಂಭಾಷಣೆಯು ಸ್ವಾರಸ್ಯಮಯವಾಗಿದೆ. ವಿಶ್ವಾಮಿತ್ರನ ಮಾತಿನಲ್ಲಿ ಕ್ಷಾತ್ರವೂ, ವಸಿಷ್ಠನ ಮಾತಿನಲ್ಲಿ ಸ್ಥೈರ್ಯವೂ ಹೇಗೆ ಕಂಡುಬರುವವೆಂಬುದನ್ನು ನೋಡುವಾ. . . . .

ವಿಶ್ವಾ—ನಿಲ್ ನುಡಿಯಬೇಡ. . . . .

ಬೇಸಱದೆ ಕೇಳ್ವ ದೇವೇಂದ್ರನುಂಟೆಂದಿಂತು
ಹೇಸದಕಟಕಟ ಸೊರಹುವರೆ. . . .

ವಸಿಷ್ಠ—ನಾ ಸೊರಹಿದಾತನಧಿಕನಲ್ಲದನೆ?

ವಿಶ್ವಾ—ರಾಶಿ ಹೊನ್ನುಂಟುಧಿಕನಹನು.

ವಸಿಷ್ಠ—ಹೊನ್ನ ಮಾತೀಸಭೆಯೊಳೇಕೆ? ಸತ್ಯನೆ ಹೇಳು?

ವಿಶ್ವಾ—ಸತ್ಯ ಲೇಶವಂತವನಾಳ್ವ ದೇಶದೊಳು
ಕೇಳ್ದಱಿಯೆ.

ವಸಿಷ್ಠ—ವಿಶ್ವಾಮಿತ್ರರ ವಾಗ್ವಾದದಿಂದ ಕಾವ್ಯದ ಪ್ರಾರಂಭಕ್ಕೇ ನಾಟಕದ ಕಳೆ ಬಂದು ಹೋಗುತ್ತದೆ. ಮುಂದೆ ಇಡೀ ಕಾವ್ಯವೇ ನಾಟಕಮಯವಾಗಿ ಪರಿಣಮಿಸುಸುವುದು. ವಿಶ್ವಾಮಿತ್ರನು ಕೋಪದಿಂದ ಹರಿಶ್ಚಂದ್ರನು ವರುಣನಿಗೆ ಹುಸಿದ ಕಥೆಯನ್ನು ವಿಸ್ತರಿಸುವನು. ವಸಿಷ್ಠರು ಅದನ್ನ ಬಲವಾಗಿ ವಿರೋಧಿಸಿ ಹೀಗೆ ನುಡಿಯುವರು:

ವಸಿಷ್ಠ—ಹಲವು ಮಾತೇಕಾ ಹರಿಶ್ಚಂದ್ರ ಭೂನಾಥ
ನೋಳಗಸತ್ಯವನು ಕಾಣಿಸಲು ಬಲ್ಲರು ಧಾತ್ರಿ
ಯೊಳು ಮುನ್ನ ಹುಟ್ಟಿದವರಿಲ್ಲಿನ್ನು ಹುಟ್ಟುವರ ಕಾಣೆ
ವಿಶ್ವಾ—ನಿಲ್ಲಾಡದಿರು ಬಾಯಿ ಹಿರಿದುಂಟೆಂದು . . . .
ವನಧಿ ಪರಿಯಂತ ಧರೆಗರಸುತನವದಱ ಮೇ
ಲನುವುಳ್ಳ ಶಿಷ್ಯನಾಗಿಹನು ನಿನಗತಿ ವಿಪುಳ
ಧನವ ನಾರಾಧಿಸುವನು... ಎನಿತನಗ್ಗಳಿಸಿ
ಬಣ್ಣಿಸಲೊಪ್ಪದಯ್ಯ ।
ವಸಿಷ್ಠ—ರಾಜಪ್ರತಿಗ್ರಹದ ಬಲದವನೆ ನಾನು ?
ವಿಶ್ವಾ—ಮುನಿಯಬೇಡಾತ ಹುಸಿದನಾದೊಡೆ ನಿನ್ನ
ನೇಗಯ್ಯಬಹುದು ?
ವಸಿಷ್ಠ—ಶ್ರುತಿ ಮತ ಕುಲಾಚಾರ ಧರ್ಮಮಾರ್ಗಂ
ಮಹಾ ವ್ರತಾನುಷ್ಠಾನ ಗುರುವಾಜ್ಞೆ ಲಿಂಗಾರ್ಚನೋ
ನ್ನತತಪಂ ಬ್ರಹ್ಮಕರ್ಮಂ ಬೆಳೆದ ಪುಣ್ಯವೊಳಗಾದವಂ
ತೊಱೆದು ಕಳೆದು
ಸತಿಯನುಳಿದತಿ ದಿಗಂಬರನಾಗಿ ಮುಕ್ತಕೇ
ಶಿತನಾಗಿ ನರಕಪಾಲದೊಳು ಸುರೆಯೆಱೆದು ಕುಡಿ
ಯುತ ತೆಂಕಮುಖವಾಗಿ ಹೋಹೆಂ ಹರಿಶ್ಚಂದ್ರಂ
ಮಱೆದು ಹುಸಿಯಂ ನುಡಿದಡೆ ॥

ವಸಿಷ್ಠ—ವಿಶ್ವಾಮಿತ್ರರ ಕದನದಿಂದ ದೇವೇಂದ್ರನ ಒಡ್ಡೋಲಗದ ಸಭಿಕರು ತತ್ತರಿಸಿದರು. ಏನನ್ನಾಡಲು ಯಾರಿಗೂ ಧೈರ್ಯವಾಗಲಿಲ್ಲ ಸ್ವತಃ ದೇವೇಂದ್ರನೇ 'ಒಂದಕ್ಕೆ ಹಿತನುಡಿಯೆ ಪಕ್ಷವೆಂದು, ಎರಡುವಂ ಹಿಂದು

ಗಳೆಯುದಿರಲುಪೇಕ್ಷಿತನೆಂದು, ಜಱಿದಡೆ ಎಮ್ಮಿಂದಧಿಕನೇ ಎಂದು, ಹೊಗಳ್ದಡುಪಚಾರವೆಂದು ನೊಂದು' ಮುನಿಗಳು ಶಾಪಕೊಡುವರೆಂದು ಆನಂದರಸವಱಿತು ಬೆಱಗಿನ ಮೊಗದೊಳಿದ್ದನಂತೆ"![೧] ಇಲ್ಲಿ ಕವಿಯು ಸಹಜ ವರ್ಣನೆಯು ಕಂಡು ಬರುವುದು. ಸಭೆಯೆಲ್ಲವೂ ಮೌನದ ಕಡಲಿನಲ್ಲಿ ಮುಳುಗಿರುವಾಗ ನಾರದ ಧಟ್ಟಿಸುತ್ತೆದ್ದು 'ಕೊಡು ವಸಿಷ್ಠಂಗೆ ಭಾಷೆಯನು ಕೌಶಿಕ' ಎಂದು ಕೂಗುತ್ತಾನೆ.

ವಿಶ್ವಾ—ಧರೆಯೊಳು ಚತುರ್ಯುಗಂಗಳು ಮರಳಿ
ಮರಳಿ ಸಾ|
ವಿರ ಬಾರಿ ಬಂದಡಜಗೊಂದು ದಿನವಾ ದಿನದ
ಪರಿದಿನಂ ಮೂವತ್ತು ಬರಲೇಕ ಮಾಸವಾ ಮಾಸ
ಹನ್ನೆರಡಾಗಲು
ವರುಷವಾ ವರುಷ ಶತವೆಂಬುದೀ ಸುರಪತಿಗೆ
ಪರಮಾಯುವೀತನೀರೇಳ್ಭವಂ ಬಪ್ಪನ್ನೆ
ವರ ದೇವ ಲೋಕಕ್ಕೆ ಬಾರೆಂ ಪ್ರತಿಜ್ಞೆಯೆನಗೆಂದ....[೨]

ತನ್ನ ಪುಣ್ಯದೊಳರ್ಧವನ್ನು ಹರಿಶ್ಚಂದ್ರನಿಗೆ ಕೊಡಲೊಪ್ಪುವನು. ಇಲ್ಲಿಗೆ ಅವರೀರ್ವರ ವಾಗ್ವಾದವು ಮುಗಿಯಿತಾದರೂ ವಿಶ್ವಾಮಿತ್ರನ ಮೂದಲಿಕೆಯು ಪ್ರಾರಂಭವಾಗುವುದು.

---

೧. ಹರಿಶ್ಚಂದ್ರ ಕಾವ್ಯಂ ದ್ವಿತೀಯಾಸ್ಥಲ ಪ-೨೪ ಪು ೨೩
೨. ,, ,, ಪ. ೨೫ ಪು ೨೩
ಸಂ|| ಎಸ್. ಬಸವರಾಧ್ಯ ಎಂ. ಎ. ಪಂ. ಎಸ್. ಬಸಪ್ಪ

ವಿಶ್ವಾಮಿತ್ರ— "ಇನಿತು ಮುಳಿಸಾವುದು!
ಹರಿಶ್ಚಂದ್ರ ಭೂಭುಜನ।
ಮನೆಗೀಗಳಿಂತು ನೀ ಹೋಗಿ ಕೌಶಿಕನು ನೆ।
ಟ್ಟನೆ ನಿನ್ನನಂತಿಂತು ಕೆಡಿಸಿದಪ
ನೀನಾವ ಪರಿಯುಲೆಚ್ಚತ್ತಿರೆಂದು ॥
ನೆನಿಸಿಕೊಡು ಹೋಗು" . . . .
ವಸಿಷ್ಠ— "ಆ ನಾಡುವವನೆ ಹೇಳು।"

ವಿಶ್ವಾ—"ಎನ್ನ ಗಾಸಿಗಾಱದೆ ನೃಪಂ ಹುಸಿನುಡಿಯೆ
ಮುನಿತನವ ನೀಡಾಡಿ
ಹೋಹಂತಿರಾದಪುದು. ಹೋಗಿ ನೀಂ ಹೇಳು।"
ವಸಿಷ್ಠ—"ತರಣಿ ತೇಜಂಗೆಡದಿರಗ್ನಿ ಬಿಸುಪಾಱದಿರು
ಸರಸಿರುಹವೈರಿ ತಂಪಂ ಬಿಡದಿರೆಲೆಲೆ ಮಂ
ದರವೆ ಚಲಿಸದಿರೆಂದು ಬೋಧಿಸಲದೇಕೆ ನಿಜವಳಿವವೇ
ಸುಮ್ಮನಿರಲು?"
ವಿಶ್ವಾ—ಸಿಡಿಲು ಹೊಡೆವಡೆ ಹಿಡಿದ ಕೊಡೆ ಕಾವುದೇ....
ಕವಿದು ಹೆ।
ಗ್ಗಡಲುಕ್ಕಿ ಜಗವ ಮೊಗೆವಡೆ ಮೆಳೆಗಳಡ್ಡ
ಬಹವೇ ಹೇಳು ಮುನಿಪ ನಿನ್ನ।
ಬಡ ಬೋಧೆ ಗೀಧೆಗಳು ರಕ್ಷಿಸುವುವಲ್ಲ; ನಾಂ.....
ನೀ ಹೇಳದಿರ್ದಡೆ ಮದನ ಹರನಾಣೆ"......
ವಸಿಷ್ಠ—"ಕುಲವ ನಾಲಗೆಯುಱುಹಿತೆಂಬ
ನಾಣ್ನುಡಿಗಿಂದು

ನೆಲೆಯಾಯ್ತಲಾ ಬ್ರಹ್ಮಋಷಿಯಾದಡೊಳಗುಂ ನಿ|
ರ್ಮಳವಪ್ಪುದಯ್ಯಾ ನೀಂ ರಾಜರ್ಷಿ ಕೋಪಿಸದೆ
ಧಟ್ಟಿಸದೆ ಕೆಡೆ ನುಡಿಯದೆ
ನಿಲಲೆಂತು ಬಲ್ಲೆಯೆನಲು......

ವಿಶ್ವಾಮಿತ್ರನ ಸಿಡುಕಿನ ಸ್ವಭಾವ, ಹಟಕೋಪ ಇವೆಲ್ಲವೂ ವಸಿಷ್ಠರ ಶಾಂತಿ ಸೌಜನ್ಯದ ಮುಂದೆ ಗೌಣವಾಗಿವೆ.

'ಕೋಣಗಳ ಹೋರಾಟ ಗಿಡಕ್ಕೆ ಮೃತ್ಯು' ಎಂಬಂತೆ ವಸಿಷ್ಠ ವಿಶ್ವಾಮಿತ್ರರ ಹೋರಾಟ ಹರಿಶ್ಚಂದ್ರನನ್ನು ಕಷ್ಟಕ್ಕೆ ಗುರಿ ಮಾಡಿತು.

## ೨. ಹರಿಶ್ಚಂದ್ರ-ಗಾಯಕಿಯರ ಸಂವಾದ

ಹರಿಶ್ಚಂದ್ರನ ರಾಜ್ಯದಲ್ಲಿ ಹಿಂಸ್ರ ಪಶುಗಳನ್ನೂ, ಖಗಗಳನ್ನೂ ಹುಟ್ಟಿಸಿ ಹಿಂಸೆಕೊಡುವವನು ಕೌಶಿಕನು. ಪ್ರಜೆಗಳು ಅವುಗಳ ಕಾಟಕ್ಕೆ ಬೇಸತ್ತು 'ಖಗಮೃಗದ ಕಾಟದಿಂದ ಧರೆಯೊಳಗೆ ಬಿತ್ತಿಲ್ಲ, ಬೆಳೆಯಿಲ್ಲ, ನೀರಿಲ್ಲ' ಎಂದು ಮೊರೆಯಿಡುವರು. ಅವುಗಳ ಕಾಟವನ್ನು ಪರಿಹರಿಸಲು ಬೇಟೆಗೆ ಹೊರಟ ಹರಿಶ್ಚಂದ್ರನು ವಸಿಷ್ಠರ ಆಶ್ರಮಕ್ಕೆ ಬಂದು ಗುರು ದರ್ಶನವನ್ನು ಪಡೆಯುವನು. ವಸಿಷ್ಠರು 'ಮಗನೆ ಹೋಗದಿರು ಮಱೆದು ವಿಶ್ವಾಮಿತ್ರನಾಶ್ರಮಕ್ಕೆ; ಗನ್ನದಿಂ ಮಱಹಿಕ್ಕಿ ಕೊಂಡೊಯ್ದು ಬಳಿಕ ಮುನಿ ಬನ್ನ ಬಡಿಸಿಯೆ ಕಾಡಿದಪನಱಿದಿರು ...' ಎಂದು ಎಚ್ಚರಿಕೆ ಕೊಟ್ಟು ಕಳುಹಿಸುವನು.

ಆದರೆ ವಿಧಿಯು ಹರಿಶ್ಚಂದ್ರನನ್ನು ಅಲ್ಲಿಗೇ ಎಳೆದುಕೊಂಡು ಹೋಯಿತು. ಹರಿಶ್ಚಂದ್ರನು ಒಂದು ಕಾಡುಹಂದಿಯನ್ನು ಬೆನ್ನಟ್ಟಿ ಅರಿಯದೆ ವಿಶ್ವಾಮಿತ್ರನ ಆಶ್ರಮವನ್ನು ಪ್ರವೇಶಿಸುವನು. ಬೇಟೆಯ ಆಯಾಸವೊಂದು ಕಡೆ, ಗುರುವಾಜ್ಞೆಗೆ ವಿರೋಧವಾಗಿ ವಿಶ್ವಾಮಿತ್ರನೆಡೆಗೆ ಬಂದುದು, ದುಸ್ವಪ್ನ, ದೌರ್ಮನಸ್ಯಗಳ ಕಳವಳ ಒಂದು ಕಡೆ; ಈ ಸ್ಥಿತಿಯಲ್ಲಿ ವಿಶ್ವಾಮಿತ್ರನ 'ಹೊಲೆ'ಯಾದ ಕೋಪ ಬದ್ಧದ್ವೇಷ, ಅನಿಮಿತ್ತ ವೈರ'ಗಳಿಂದ ಹುಟ್ಟಿದ ಇಬ್ಬರು ಸ್ತ್ರೀಯರು ಬಂದು ಗಾನಮಾಡಿ ಅವನ 'ದುಗುಡವನ್ನು ರಾಗರಸಲಹರಿಯಿಂದ ತೊಳೆದರು.' ಅವನು ಅದಕ್ಕೆ ಸಂತೋಷಬಟ್ಟು ತನ್ನ ಸರ್ವಾಭರಣವನ್ನೂ ಕೊಡುವನು. ಅವರು ಬಂದಿದ್ದು ಸಂಪಾದನೆಗಲ್ಲ ವ್ಯಾಜ್ಯಕ್ಕೆ; ಆದ್ದರಿಂದ ಅಷ್ಟಕ್ಕೆ ಒಪ್ಪಲಿಲ್ಲ ಈ ಸಂದರ್ಭದಲ್ಲಿ ಹರಿಶ್ಚಂದ್ರನ ಸೌಮ್ಯಗುಣವನ್ನೂ, ಗಾಯಕಿಯರ ವಕ್ರಸ್ವಭಾವವನ್ನೂ ಕವಿ ಚನ್ನಾಗಿ ಚಿತ್ರಿಸಿದ್ದಾನೆ. ಅವರ ಸಂಭಾಷಣೆಯು ರಸವತ್ತಾಗಿದೆ.

ಗಾಯಕಿಯರು — 'ಬಡತನದ ಹೊತ್ತು ಆನೆ ದೊರಕಿ
ಫಲವೇನು? ನೀರಡಿಸಿರ್ದ
ಹೊತ್ತಾಜ್ಯ ದೊರಕಿ ಫಲವೇನು...ಕಡುವಿಸಿಲು
ಹೊಡೆದು ಬೆಂಡಾಗಿ
ಬೀಳ್ವೆಮಗೆ ನೀನೊಲಿದು ಮಣಿದೊಡಿಗೆಗಳನಿತ್ತು
ಫಲವೇನು

ಭೂಪಾಲ!......ನಿನ್ನ ಮುತ್ತಿನ ಸತ್ತಿಗೆಯನ್ನಿತ್ತು
ಸಲಹು!'
ಹರಿಶ್ಚಂದ್ರ—'ರವಿಕುಲದ ಪೀಳಿಗೆಯೊಳೊಗೆದ
ರಾಯರ್ಗೆ ಪ
ಟ್ಟವ ಕಟ್ಟುವಂದಿದಿಲ್ಲದಡರಸುತನ
ಸಲ್ಲದವನಿಯೊಳು; ಯುದ್ಧ
ರಂಗದೊಳಿದಂ ಕಂಡ ಹಗೆಗಳು ನಿಲ್ಲರು;
ನಿಲ್ಲರಿದಱ ಕೆಳಗೆ
ಕವಿವನೆಳಲೊಳ ಗಾವನಿರ್ದನಾತಂಗೆ ತಾಂ
ತವಿಲೆಡರು ಬಡತ
ನಂ ರೋಗವಪಕೀರ್ತಿ ಪರಿಭವ ಭಯಂ
ಹರೆವುದು; ಇದನಱಿ
ದಱಿದು ಸತ್ತಿಗೆಯ ಕೊಡಬಹುದೆ?'

ಹೀಗೆಯೇ ಬಹುವಾಗಿ ವಾದವಿವಾದಗಳು ನಡೆದುವು. ಆದರೆ ಹರಿಶ್ಚಂದ್ರನು ತನ್ನ ಶ್ವೇತಚ್ಛತ್ರವನ್ನು ಕೊಡಲೊಪ್ಪಲಿಲ್ಲ. ಅವಿವೇಕಕ್ಕೆ ಹೊರಟಿರುವವರಿಗೆ ಅಲ್ಲದ್ದಾವುದು, ಸಲ್ಲದ್ದಾವುದು ಎಂಬುದರ ಅರಿವಾಗುವುದಿಲ್ಲ. 'ಛತ್ರವಿಲ್ಲದಿದ್ದರೆ ಹೋಗಲಿ, ನಮ್ಮನ್ನು ಮದುವೆ ಮಾಡಿಕೊ!' ಎಂದು 'ಅಳವಳಿದು ಬಾಯ್ಬಿಟ್ಟು ಕೈಮುಗಿದು' ಕೇಳಿಕೊಂಡರು.

ಹರಿಶ್ಚಂದ್ರ—ಸೂರ್ಯಕುಲದ ರಾಯರ್ಗೆ ವಂಶದೊಳು ಕೀರ್ತಿಯೊಳು, ಭುಜಬಲದೊಳೊರೆದೊರೆಯೆನಿಸಿ ಕನ್ನಿಕೆಯರಂ ಕೊಡುವ ಭೂಪರಿಲ್ಲಿಂದು ತನಕ ಹೊಲತಿಯರು ಬಂದಾವ ಸತಿಯರಾದಪ್ಪೆವೆಂಬ-ಲಿಹವೆಂಬುದು ಬಂದ ಕಾಲಗುಣವೋನಿಂದ ನೆಲದ ಗುಣವೋ!

ಗಾಯಕಿಯರು—ಪಾವನಕ್ಷೀರವಂ ಕೊಡುವ ಕೆಚ್ಚಲ
ಮಾಂಸ
ವಾವಲೇಸಿನಿದುಳ್ಳ ಮಧುವ ನೊಸೆದೀವ......
......ಉತ್ತಮ ಗುಣಂಗಳಿ
ರ್ದಾವ ಕುಂದಂ ಕಳೆಯಲಾಱಿವವನೀಶ ಕೇಳ್
ಭಾವಿಸುವೊಡೆಂದೆಮ್ಮ ರೂಪು ಜವ್ವನವಿರಲು ಕುಲದ
ಮಾತೇಕೆ ?
ಹರಿಶ್ಚಂದ್ರ—ಅಕ್ಕಕ್ಕು ಬಚ್ಚಲುದಕಂ ತಿಳಿದಡಾರ ಮೀ
ಹಕ್ಕೆ ಯೋಗ್ಯಂ ನಾಯ್ಗೆ ಹಾಲುಳ್ಳಡಾವನೂ
ಟಕ್ಕೆ ಯೋಗ್ಯಂ ಪ್ರೇತವನದೊಳಗೆ ಬೆಳೆದ ಹೂವಾರ
ಮುಡಿಹಕ್ಕೆ ಯೋಗ್ಯಂ ||
ಮಿಕ್ಕ ಹೊಲತಿಯರು ನೀವೆನೆ ನಿಮ್ಮ ಜವ್ವನದ
ಸೊಕ್ಕು ರೂಪಿನ ಗಾಡಿ ಜಾಣತನದೊಪ್ಪವೇ
ತಕ್ಕೆ ಯೋಗ್ಯಂ ರಮಿಸಿದವರುಂಟೆ ಶಿವಶಿವೀ ಮಾತು
ತಾ ಹೊಲೆ
ಗಾಯಕಿಯರು—'ಹಾಡನೊಲಿದಾಲಿಸಿದ ಕಿವಿಗೆ
ಹೊಲೆಯಿಲ್ಲ ಮಾ|
ತಾಡಿ ಹೊಗಳಿದ ಬಾಯ್ಗೆ ಹೊಲೆಯಿಲ್ಲ ರೂಪನೆಱೆ
ನೋಡಿದ ವಿಲೋಚನಕೆ ಹೊಲೆಯಿಲ್ಲ ಮೆಯ್
ಮುಡಿಗಳಿಂ ಸುಳಿವ ತಂಗಾಳಿಯಿಂ ||
ತೀಡುವ ಸುಗಂಧಮಂ ವಾಸಿಸಿದ ನಾಸಿಕಕೆ|
ನಾಡೆ ಹೊಲೆಯಿಲ್ಲ ಸೋಂಕಿಂಗೆ ಹೊಲೆಯುಂಟಾಯ್ತು
ಕೂಡಿರ್ದ ಪಂಚೇಂದ್ರಿಯಂಗಳೊಳು ನಾಲ್ಕಧಮ
ವೊಂದಧಿಕವೇ,

ಗಾಯಕರು ಪ್ರಗತಿಪರ ವಿಚಾರವನ್ನೇ ಮುಂದಿಡುವರು. ಕೊನೆಗೆ ಹೊಲತಿಯರು 'ಎಳಸಿ ಮೆಚ್ಚಿಸಿ ಮರುಳ್ಗೊಳಿಸಿ ಮತ್ತೊಲ್ಲನವನಿಪನೆಂದು ಮೊಱೆಯಿಡುತ್ತ ಇಳೆಯೊಳಗೆ ಸಾಱುತ್ತ ದೂಱುತ್ತ ಬಪ್ಪೆವು' ಇನ್ನು ಹರಿಶ್ಚಂದ್ರನಿಗೆ ತಡೆಯಲಾಗಲಿಲ್ಲ. ಅವನ ತಾಳ್ಮೆಯೂ ಹೋಯಿತು. ಹೆಂಗಸರೆಂದು ಹೇಸದೆ ಅವರನ್ನು ಚಮ್ಮಟಿಗೆಯಿಂದ ಹೊಯ್ದು ಓಡಿಸಿದನು.

ಹೊಲತಿಯರ ವಾದಕ್ಕೆ ಹರಿಶ್ಚಂದ್ರನು ಸೋತಿರುವಂತೆ ಕಾಣುವುದು. ಇಲ್ಲಿ ಕವಿಯು ಸಂಪ್ರದಾಯ ಹಾಗೂ ಪ್ರಗತಿಗಳ ನಡುವಿನ ಹೋರಾಟವನ್ನು ಚಿತ್ರಿಸಿರುವನು. ಗಾನರಾಣಿಯರ ಸನ್ನಿವೇಶವು ನಾಟಕೀಯತೆಯ ಉತ್ತಮ ನಿದರ್ಶನವಾಗಿದೆ. ಹೊಲತಿಯರ ಮಾತುಗಳಲ್ಲಿ ಯೌವನದ ಸೊಕ್ಕು, ಜಾಣತನದ ಒಪ್ಪು, ಬೆಡಗುಬಿನ್ನಾಣ, ಕಾಪಟ್ಯ, ವ್ಯವಹಾರಿಕ ದೃಷ್ಟಿ, ಇವುಗಳು ವ್ಯಕ್ತವಾದರೆ, ಹರಿಶ್ಚಂದ್ರ ಮಹಾರಾಜನ ವಾಣಿಯಲ್ಲಿ ಆದರ್ಶದ ವೀಣೆಯು ಮಿಡಿದಿದೆ. ಈ ಸಂದರ್ಭದಲ್ಲಿ ಹರಿಶ್ಚಂದ್ರನ ಜೀವನದುನ್ನತಿ, ಆದರೂ ಧರ್ಮ ಪಾಲನೆಗಳೂ, ಹೊಲತಿಯರ ಮನೋಧರ್ಮಗಳೂ ಸ್ಪಷ್ಟವಾಗಿ ರೂಪುಗೊಂಡು ಈ ಸಂದರ್ಭದ ಮಹತಿಯನ್ನು ಎತ್ತಿ ಹಿಡಿದಿರುವವು.

ರಾಘವಾಂಕನು ಹೊಲತಿಯರ ಸನ್ನಿವೇಶವನ್ನು ಅತ್ಯಂತ ತರ್ಕಬದ್ಧವಾಗಿ, ಕಾಳಜಿಪೂರ್ವಕವಾಗಿ ನಡೆಯಿಸಿ

ಕೊಂಡು ಬಂದಿದ್ದಾನೆ. ಇದು ಅವನ ಅದ್ಭುತ ವಾಕ್ಚತುರತೆ ಯನ್ನು ತೋರಿಸುವದು.

## ೩. ಚಂದ್ರಮತಿಯ ಪ್ರಲಾಪ

ಚಂದ್ರಮತಿಯು ತನ್ನನ್ನು ಮಾರಿದ ಬ್ರಾಹ್ಮಣನ ಮನೆ ಯಲ್ಲಿ ಅತ್ಯಂತ ಕಷ್ಟದಿಂದ ಇದ್ದಳು. ಆಕೆಯ ಒಡೆಯನು ಅತಿಕೋಪಿ, ಅವನ ಹೆಂಡತಿ ಮಹಾಮೂರ್ಖೆ, ಮಗ ಕಡು ಧೂರ್ತ, ಸೊಸೆ ಅಧಿಕ ನಿಷ್ಠುರೆ. ನೆರೆಹೊರೆಯವರು ಮಿಥ್ಯ ಅಪವಾದಿಗಳು. ಇಂಥವರ ಮಧ್ಯದಲ್ಲಿದ್ದುಕೊಂಡು, ಭತ್ತ ಕುಟ್ಟಿ, ನೀರುಹೊತ್ತು, ಹಾಕಿದ್ದನ್ನು ತಿಂದುಕೊಂಡಿರ ಬೇಕಾಗಿತ್ತು, ಇಷ್ಟು ಸಾಲದೆಂದು ಒಂದು ದಿನ ರೋಹಿ ತಾಶ್ವನು ಹುಲ್ಲು, ಹುಳ್ಳಿಗಳನ್ನು ತರಲು ಕಾಡಿಗೆ ಹೋಗಿ ದ್ದಾಗ ಅಲ್ಲಿ ಒಂದು ಹುತ್ತದ ಮೇಲೆ ಹುಲುಸಾಗಿ ಬೆಳೆದಿದ್ದ ಹುಲ್ಲನ್ನು ನೋಡಿ 'ಮನವುಬ್ಬಿ ನಾನಿದನೆಲ್ಲಮಂ ಗಳಗಳನೆ ಕೊಯ್ದು ಕೊಂಡೊಯ್ದಿತ್ತಡೆಮ್ಮೊಡೆಯ ಮುಳಿಯದಿಹ ನೆಂಬಾಸೆಯಿಂ' ಅದನ್ನು ಕೊಯ್ಯಲು ತೊಡಗಿದಾಗ ಹಾವು ಕಚ್ಚುವುದು. ಪತಿಯ ಸತ್ಯವನ್ನೇ ಕಾಪಾಡಬೇಕೆಂದಿದ್ದ ಸತಿಗೆ ಪುತ್ರಶೋಕ ಒದಗಿತು. 'ಅವಳ ರನ್ನಕನ್ನಡಿ' ಸಿಡಿದು ಹೋಯಿತು. ಆ ವರ್ತಮಾನವು ತಿಳಿದಾಗ ಯಾರೂ ಅವಳ ಸಹಾಯಕ್ಕಿಲ್ಲ. ಆಗ ಅವಳು ಯಜಮಾನನ ಕಾಲಮೇಲೆ ಬಿದ್ದು ತನ್ನ ಮಗನು ಹಾವು ಕಚ್ಚಿ ಮಡಿದನೆಂದು ಹೇಳಲು ಅವನು 'ಲೇಸಾಯ್ತು ಮಡಿದರೆ ಮಡಿದಂ' ಎಂದನು.

ಚಂದ್ರಮತಿ—'ಬಂಟರನು ಕೊಟ್ಟ ಅಸಿಸ್ತೆ ತಂದೆ!

ಯಜಮಾನ— 'ನಡುವಿರುಳು ಬಂಟರುಂಟೇ ? ನಿದ್ದೆ
ಗೈಯಬೇಕೇಳು ಕಾಡದಿರು'.

ಚಂದ್ರಮತಿ—'ನರಿಗಳೆಳೆಯದ ಮುನ್ನ ದಹಿಸಬೇಡವೆ
ತಂದೆ ? ಕರುಣಿಸು.'

ಯಜ—ದುರ್ಮರಣವಟ್ಟ ಶೂದ್ರನನು ಸಂಸ್ಕರಿಸು
ವವರಾವಲ್ಲ.

ಚಂದ್ರ—'ಆನಾದಡಂ ಹೋಗಿ ಕಂಡು ಮಗನ
ಉರಿಗಿತ್ತು ಬಪ್ಪೆನೇ ?

ಯಜ—'ಕೆಲಸಮಂ ಬಿಟ್ಟು ಹರಿಯದಿರ್ದಡನ್ನೆದೆ
ಗೆಯ್ದು ಹೋಗು!'

ಚಕ್ರವರ್ತಿಯ ಧರ್ಮಪತ್ನಿಗೆ ಎಂಥಗತಿ! ತನ್ನ ಮಗನ ಶವವನ್ನು ಒಪ್ಪಮಾಡುವುದಕ್ಕೂ ಸ್ವಾತಂತ್ರ್ಯವಿಲ್ಲ! ತನ್ನ ಕಷ್ಟಕಾಲದಲ್ಲಿ ಏಕಾವಲಂಬನವಾಗಿದ್ದ ಪ್ರಿಯಪುತ್ರನನ್ನು ಕಳೆದುಕೊಂಡು ಇರುವುದು ಹೇಗೆ?

ಧೈರ್ಯನಿಧಿಯಾದ ಚಂದ್ರಮತಿಯು ಇದ್ದುದನ್ನು ಚಚ್ಚರದಿ ಮಾಡಿ ಮುಗಿಸಿದಳಂತೆ. ಎಂತಹ ಮಹಾನು ಭಾವಳು! ಎಂತಹ ನಿಗ್ರಹ ಶಕ್ತಿ!! 'ಆಕೆಯು ಮಾನವತೆಯ ಮಣಿ; ಆದರ್ಶದ ಕಣಿಯಾಗಿಲ್ಲವೆ ?' ಎಂದು ಡಾ. ಆರ್. ಸಿ. ಹಿರೇಮಠರವರು ತೆಗೆದ ಉದ್ಗಾರವು ಈ ಸಂದರ್ಭಕ್ಕೆ ಯಥಾಯೋಗ್ಯವೆಂದು ಹೇಳಬಹುದು. 'ಹಡೆದೊಡಲು ಹುಡಿಯಾಯ್ತು ಮಗನೇ,' ಎಂದು ಅತ್ತ ಶಬ್ದಗಳನ್ನು ಎಂತು ಬಣ್ಣಿಸಬೇಕು ? ಶವಸಂಸ್ಕಾರಕ್ಕೆ ಅವಳಲ್ಲಿ ಹಣವಿಲ್ಲ.

ಆದುದರಿಂದ ಸ್ಮಶಾಸನದಲ್ಲಿ ಮುನ್ನ ಸುಟ್ಟುಳಿದಿರ್ದ ಕರಿಯು ಕೊಳ್ಳಿಗಳನ್ನು ತಂದು ಒಟ್ಟಿ ಮುಟ್ಟಿಗೆಯ ಮೇಲೆ ಮಂಗಲ ಮಯ ಸುಕುಮಾರನನ್ನು ಇರಿಸಿ ಕೈಯಲ್ಲಿ ಉರಿವ ಕೊಳ್ಳಿಗಳನ್ನು ಹಿಡಿದು 'ಬೆಳೆದಲ್ಲಿ ಬೆಳೆ ಹುಟ್ಟಿದಲ್ಲಿ ಹುಟ್ಟೆಂದು' ಆ ತಾಯಿಯು ಹೇಳುವಾಗ ಅವಳ ದುಃಖವು ಎಲ್ಲೆಯನ್ನು ಮೀರುವುದು. ಆ ಆಕ್ರಂದನವನ್ನು ಕೇಳಿದ ಹರಿಶ್ಚಂದ್ರ

ಭೂವರನು-ನಟ್ಟಿರುಳು ಸುಡುಗಾಡೊಳೊಬ್ಬ
ಳೋರಂತೆ ಬಾಯ್ಬಿಟ್ಟು ಹಲುಬುವ ವೀರ ನಾರಿ
ಯಾವಳೊ ಮೀಱಿ ಸುಟ್ಟೆಯಾದಡೆ ನಿನಗೆ
ವೀರಬಾಹುಕನಾಣೆ ..

ಎಂದು ಹೇಳಿ ಅವಳ ಕೈಯಲ್ಲಿಯ ಕಿಚ್ಚನ್ನು ಕೆದರಿ ಮುಟ್ಟಿಗೆಯ ಮೇಲಿರ್ದ ಸುತನ ಹಿಂಗಾಲ್ವಿಡಿದು ಬಿಸುಡುವನು. ಆಗ ಚಂದ್ರಮತಿಯು

ಬಿಸುಡದಿರು ಬಿಸುಡದಿರು ಬೇಡ ಬೇಡಕಟಕಟ
ಹಸುಳೆ ನೊಂದಹನೆಂದು ಬೀಳ್ವವನನೆತ್ತಿ ತ
ಕ್ಕಿಸಿಕೊಂಡು ಕುಲವನೋಡದೆ ಬೇಡಿಕೊಂಬೆನಿವನೆನ್ನ
ಮಗನಲ್ಲ ನಿನ್ನ
ಶಿಶುವಿನೋಪಾದಿ ಸುಡಲನುಮತವನಿತ್ತು ಕರುಣಿಸು
ಕರುಣಿ

ಎಂದು ಬೇಡಿಕೊಳ್ಳುವಾಗ ಯಾರ ಹೃದಯದ ಕರುಳು ಮಿಡಿಯಲಿಕ್ಕಿಲ್ಲ. ತಾಯಿಯ ಉತ್ಕಟ ಪ್ರೇಮದ ನಿದರ್ಶನ

ವಿದು. ಪ್ರತ್ಯಕ್ಷ ತಂದೆಯಾದ ಹರಿಶ್ಚಂದ್ರ ನರನಾಥನಿಗೆ 'ನಿನ್ನ ಶಿಶುವಿನೋಪಾದಿಯಲಿ ಸುಡಲನುವಂತವನಿತ್ತು ಕರುಣಿಸು' ಎಂದು ಹೇಳುವ ಆ ತಾಯಿಯ ಆರ್ತ ಸ್ವರದ ಕೂಗನ್ನು ಕೇಳಿ ಹೃದಯವು ಇಬ್ಭಾಗವಾಗುವುದು. ಹರಿಶ್ಚಂದ್ರ ನಾದರೂ ಅಷ್ಟೇ ನಿಷ್ಠುರ ಸತ್ಯಪರಿಪಾಲಕ.

ಹರಿಶ್ಚಂದ್ರ– ......ಮರುಳೆ ಹೆಣನುಟ್ಟುದಂ
ಮಸಣ ವಾಡಗೆಯ ಹಾಗವನು ಕೊಟ್ಟಲ್ಲದೇನೆಂದಡಂ
ಬಿಡೆನಾ

ಚಂದ್ರ—ಕೊಡಲೇನುವಿಲ್ಲವಿಂದೆನಗೆ ಲೋಗರ ಮನೆಯ
ಬಡದಾಸಿ ಕರುಣಿಸೆಸಿ
ಹರಿಶ್ಚಂದ —ನಿನ್ನ ಕೊರಳಿನೊಳಿರ್ದಕಡು
ಚೆಲುವ ತಾಳಿಯನದನ್ನಿಡವನಿರಿಸಿ ಬಿಡಿಸಿಕೊಳಬಳಿಕ

ಚಂದ್ರ—ಪೊಡವಿಪತಿ ಮಡಿದ ಕೇ|
ಡಡಸಿತಲ್ಲದೊಡೆನ್ನ ಗುಪ್ತ ಮಂಗಳಸೂತ್ರ
ದೆಡೆಯ ಹೊಳೆ ಹೊಳೆ ವೈದಾಳಿಯನಿದಂ ಶ್ವಪಚನೆಂತು
ಕಂಡಪನು

ಎಂದು ದುಃಖಿಸಿ ತನ್ನ ಪತಿಯು ಮಡಿದ ಕೇಡಲ್ಲದೆ ತನ್ನ ಗುಪ್ತ ಮಂಗಳ ಸೂತ್ರದ ಎಡೆಯನ್ನು 'ಈ ಹೊಲೆ ಯನೆಂತು ಬಲ್ಲನು ?' ಎಂದು ಪ್ರಶ್ನಿಸುವ ಚಂದ್ರಮತಿಯ ಮಾತಿನಲ್ಲಿ ವಿಧಿಯು ಇತ್ತ ಘೋರ ಶಿಕ್ಷೆಯ ಅರಿವಾಗು ವುದು.

ಚಂದ್ರ— ವಿಗತಸಪ್ತ ದ್ವೀಪ ಪತಿಯ ಬಸುಱಲಿ ಬಂದು
ಮಗನೆ ನಿನಗೊಮ್ಮೆಟ್ಟು ಸುಡುಗಾಡು ಹಗೆಯಾಯ್ತೆ
ಮಿಗೆ ಸಕಲ ಲೋಕದೊಳು ತನ್ನಾಣೆ ಸಲುವನ ಕುಮಾರ
ನೆನಿಸುವ ನಿನ್ನನು
ಬಗೆಯ ದೀ ಚಾಂಡಲ ನಾಣೆ ಯಿಡುವಂತಾಯ್ತೆ
ಜಗದ ನವಸಿಧಿಗೊಡೆಯನಾತ್ಮ ಭವನೆನಿಸಿ ಮು
ಟ್ಟಗೆಯ ಸುಂಕದ ಹಾಗವಿಲ್ಲಾಯ್ತೆ ಮಗನೆ
ಎಂದಳಲಿದಳು.

ಇಲ್ಲಿ ಕರುಣೆಯ ಸಾಗರವೇ ಉಕ್ಕಿಬಂದಂತಾಗುತ್ತದೆ. ಆದರಲ್ಲಿ ಧರೆಯ ಮಾನವರು ಮುಳುಗಿ ಹೋಗುವರು. ಅಂತೆಯೇ ಧೈರ್ಯ ನಿಧಿಯಾದ ಹರಿಶ್ಚಂದ್ರ ನರನಾಥನು ಕೂಡ ಅವಳ ಅಳಲನ್ನು ಕಂಡು ನಡುಗಿ 'ವಿಶ್ವಾಮಿತ್ರಮುನಿ ಮತ್ತೆನಾಡಿದ ತೊಡಕಾಗದಿರದು' ಎಂದು ಚಿಂತಿಸಿ.

ಹರಿಶ್ಚಂದ್ರ—'ಆವ ಲೋಕದೊಳಾಣೆ ಸಲುವುದೆನಿಸುವ
ಭೂಪನ
ತನಯನೀ ತರಳನೆಲೆ ತುರುಣಿ ನೆಲದೆಱೆಯ ನಿ।
ಕ್ಕೆನಲು ಕೊಡಲದಿಲ್ಲಧಿಕರ ಪೆಸರ್ಗೊಳಲು ಬಿಡು।
ವೆನೆ ಶೋಕಿಸುವ ಹೊತ್ತು ಹುಸಿದು ಶೋಕಿಸು
ವೊಡೇನಹುದು..."

ಹರಿಶ್ಚಂದ್ರನು ತನ್ನ ಸತಿಸುತರ ಯೋಗಕ್ಷೇಮವನ್ನು ವಿಚಾರಿಸುವನು. ಮಗನು ಮಡಿದ ಕಾರಣವನ್ನು ಕೇಳುವನು.

ಚಂದ್ರಮತಿ—'ಕಾಳೋರಗಂ ಕಚ್ಚಿ ।ಮಡಿದನೀ ಕಂದನೀ

ವಿಧಿಗೆ ಸೇರಿತು ಹರಿಶ್ಚಂದ್ರ ನಿರವು'
ಎಂದು ಹೇಳಲಾಗಿ ತನ್ನ ಕಾರ್ಯಕ್ಕೆ ತಾನೇ ಹೇಸಿ
ಹರಿಶ್ಚಂದ್ರ—'ಜನಕೆ ನಗೆಗೆಡೆಯಾದ ಪಾತಕ ಹರಿಶ್ಚಂದ್ರ
ನವನನೇನೆಂದು ನೆನೆದಪೆ' ತುಚ್ಛೀಕರಿಸಿ ಮಾತನಾಡಲು.

ಚಂದ್ರ—'ಮೃಡನಲ್ಲದಖಿಳ ಲೋಕಕ್ಕೊಡೆಯರಿಲ್ಲೆಂಬ
ನುಡಿಯುಂತಿರೆನಗಾ ಹರಿಶ್ಚಂದ್ರನಲ್ಲ ದಿನ್ನಾರು ಗತಿಮತಿ'

ಚಂದ್ರಮತಿಯು ಪತಿವ್ರತೆಯರಧಿದೇವಿಯೆನ್ನುವಂತೆ ಆಕೆಯ ಪಾತ್ರವನ್ನು ತನ್ನ ಪ್ರತಿಭೆಯ ಕುಂಚಿಸಿಂದ ಚಿತ್ರಿಸಿದ ಕವಿ ರಾಘವಾಂಕನು ಧನ್ಯನು! ಅವಳ ಉಚಿತವಾದ ಮಾತುಗಳು ಕರ್ಣಪಥದಲ್ಲಿ ಸೇರಿ ಚಿತ್ತವನ್ನು ತೊತ್ತುಳದುಳಿದು ಧೈರ್ಯವನ್ನು ಕದಡುವುದು. ತನ್ನ ಪತಿವ್ರತಾ ಶಿರೋಮಣಿಯಾದ ಚಂದ್ರಮತಿಯನ್ನೂ, ಸೊಬಗು ಸುಕುಮಾರನಾದ ರೋಹಿತಾಶ್ವನನ್ನೂ 'ನೀಚ ದ್ವಿಜೇರಂಗೆ ಮಾರಿ' ಉರಗ ಕೊಲುವಂತೆ ಮಾಡಿದೆ'ನೆಂದು ಮಗನ ಮೇಲೆ ದೊಪ್ಪನೆ ಕೆಡೆದು' ಬೀಳುವನು ಅಂಥ ಸಂದರ್ಭದಲ್ಲಿಯೂ ಕೂಡ ಅವಳು ಪತಿಯ ಹಿತವನ್ನೇ ಬಯಸುವಳು.

ಚಂದ್ರಮತಿ—'ತನಗೆ ಹೊಯ್ ಕೈಯುಪ್ಪ ಭೂಭುಜರ
ನೋಲೈಸಿ
ಧನವನಾರ್ಜಿಸಿ ತಂದು ಸೆಟಿ³ಯ ಬಿಡಿಸುವನೆಮ್ಮ
ಜನಪನೆಂದಾಗಿರಲು ಮಾದಿಗಂಗಾಳಾಗಿ ಸುಡುಗಾಡ
ಕಾವ ಬಾಗ್ಯ

ನಿನಗಾಯ್ತೆ ಭೂಪಾಲ!'

ಚಂದ್ರಮತಿಯ ಅಭಿಮಾನವು ಮೇರು ಸಾದೃಶ್ಯವಾದುದು. ಕೊನೆಗೆ ಕಾಶೀಪತಿಯ ಪುತ್ರನ ಕೊಲೆಯ ಅಪರಾಧವು ಚಂದ್ರಮತಿಯ ಮೇಲೆ ಬಂದಾಗ ಅವಳನ್ನು ಹರಿಶ್ಚಂದ್ರನು ಖಡ್ಗದಿಂದ ಹೊಡೆಯಲನುವಾದಾಗ

ಚಂದ್ರಮತಿ—'ಕಲಿ ಹರಿಶ್ಚಂದ್ರ ರಾಯಂ
ಸತ್ಯವೆರಸಿ ಬಾ।
ಳಲಿ ಮಗಂ ಮುಕ್ತನಾಗಲಿ ಮಂತ್ರಿ ನೆನೆದುದಾ
ಗಲಿ ರಾಜ್ಯದೊಡೆಯ ವಿಶ್ವಾಮಿತ್ರ ನಿತ್ಯನಾಗಲಿ
ಹರಕೆ ಹೊಡೆ।

ಹರಕೆಯನ್ನು ಕೇಳಿ ಆಶ್ಚರ್ಯ ಚಕಿತನಾದ ಹರಿಶ್ಚಂದ್ರನು 'ಹೋದಿರುಳ ನನ್ನ ಮಗನ ದುರ್ಮರಣವನ್ನು ತೋರಿಸಿ, ಈಗಲೇ, ನನ್ನ ವರಸತಿಯನ್ನು ನನ್ನ ಕೈಯಿಂದಲೇ ಕೊಲ್ಲುವಂತೆ ಮಾಡಿರುವೆ. ಇದಕ್ಕೆ ಹೇಸುವವನಲ್ಲ' ಎಂದು ಹೊಡೆಯಲನುವಾದನು.

ವಿಶ್ವಾಮಿತ್ರ—''ಹೊಡೆಯ ಬೇಡೆನ್ನ ನಂ
ದನೆಯರಂ ಮದುವೆಯಾದಡೆ ಸತ್ತಮಗನನೆತ್ತುವೆ ನಿವಳ
ತಲೆಗಾವೆನು ||
ವಿನಯದಿಂ ಕೊಂಡ ಧನವಂ ಕೊಟ್ಟು ನಿನ್ನ ಬಂ।
ಧನ ಮೋಕ್ಷವಂ ಮಾಡಿ ರಾಜ್ಯಮಂ ಪೊಗಿಸಿ ಮು
ನ್ನಿನ ಪರಿಯಲಿರಿಸುವೆಂ'' ಎಂದು ವಿಶ್ವಾಮಿತ್ರನು
ನುಡಿಯಲು

ಹರಿಶ್ಚಂದ್ರ—......"ಕಂಡಿದೇಂ ಮುನಿ ನಿಮ್ಮ
ಹಿರಿತನಕೀ ಮಾತು ಯೋಗ್ಯವೇ ಕೇಳೆನ್ನ।
ಸಿರಿ ಪೋದಡೇನು ರಾಜ್ಯಂ ಪೋದಡೇನು ನಾಸಾರ
ಸಾರಿರ್ದಡೇನು ||
ವರಪುತ್ರನಸುವಳಿದು ಪೋದಡೇಂ ನಾನೆನ್ನ।
ತರುಣಿಯುಂ ಕೊಂದಡೇಂ ಕುಂದೆ ಸತ್ಯವನು ಬಿ।
ಟ್ಟಿರನೆನಿಸಿದಡೆ ಸಾಕು."

ಎಂಥ ಧೈರ್ಯ ನಿಧಿಯಾತನು ! ಭೀಕರವಾದ ದೈವೀ ಶಕ್ತಿಯನ್ನು ಎದುರಿಸುವ ಸಾಮರ್ಥ್ಯ ಆತನಲ್ಲುಂಟು.

ಮುಂದೆ ವಿಶ್ವೇಶ್ವರನ ಸಾಕ್ಷಾತ್ಕಾರವಾಗಿವರಸತಿ ಚಂದ್ರಮತಿಯು ಮರಣವನ್ನು ತಡೆದು ರೋಹಿತಾಶ್ವನನ್ನು ಬದುಕಿಸಿ ಸಕಲ ಸಾಮ್ರಾಜ್ಯವನ್ನಿತ್ತು 'ನಿನ್ನಂತೆ ಸತ್ಯರೀ ಕ್ಷಿತಿಯೊಳಿನ್ನಾರುಂಟು' ಎಂದು ಹೇಳಿ ಪಾರ್ವತೀ ಪತಿಯು ಅವನನ್ನು ಸಮಾಧಾನಪಡಿಸುವನು. ನಾಟಕೀಯತೆಗೆ ಹರಿಶ್ಚಂದ್ರ ಕಾವ್ಯ ಕಳಸವಿಟ್ಟಂತಿದೆ. ಕನ್ನಡ ಸಾಹಿತ್ಯದಲ್ಲಿ ಗದಾಯುದ್ಧ, ಹರಿಶ್ಚಂದ್ರ ಕಾವ್ಯಗಳು ನಾಟಕೀಯತೆಗೆ ಉತ್ತಮ ನಿದರ್ಶನಗಳಾಗಿವೆ.

# ೪. ಕುಮಾರವ್ಯಾಸ ಭಾರತದಲ್ಲಿಯ ನಾಟಕೀಯತೆ: ಕರ್ಣ ಭೇದನ

ಕೌರವ ಪಾಂಡವರಲ್ಲಿ ಸಂಧಿಯು ವಿಫಲವಾಗಲು ಶ್ರೀ ಕೃಷ್ಣನು ಭೇದೋಪಾಯದಿಂದ ಕರ್ಣನ ಜನನ ವೃತ್ತಾಂತವನ್ನು ಅವನಿಗರುಹಿ ಅವನನ್ನು ಪಾಂಡವರ ಪಕ್ಷಕ್ಕೆ ಒಲಿಯಿಸಿಕೊಳ್ಳಲು ವಿಪುಲ ಯತ್ನ ನಡೆಯಿಸುವನು. ಆ ವೇಳೆಯಲ್ಲಿ ಕೃಷ್ಣನು ಕರ್ಣನನ್ನು ಕುರಿತು. ...

ಲಲನೆ ಪಡೆದೀಯೈದು ಮಂತ್ರಂ|
ಗಳಲಿ ಮೊದಲಿಗನು ನೀನು ನಿನ್ನಯ|
ಬಳಿ ಯುಧಿಷ್ಠಿರದೇವ ಮೂರನೆಯಾತ ಕಲಿಭೀಮ||
ಫಲಗುಣನು ನಾಲ್ಕನೆಯ ಲೈದನೆ|
ಯಲಿ ನಕುಲ ಸಹದೇವರಾದರು|
ಬಳಿಕ ಮಾದ್ರಿಯಲೊಂದು ಮಂತ್ರದೊಬಳಿಬರು
ದಿಸಿದರು[೧]||

ಎಂದು ಹೇಳಿ 'ನಿನ್ನಯ ಪದಕೆ ಕೆಡಹುವೆನೈವರನು ನಡೆ ತನ್ನ ಸಂಗಾತ|' ವೆಂದು ಅವನ ಮನ ಪರಿವರ್ತನೆಗೆ ಪ್ರಯತ್ನಿಸುವನು.

---

೧. ಮಹಾಭಾರತ ಉದ್ಯೋಗ ಪರ್ವ ೧೦ನೆಯ ಸಂಧಿ ಪ.೬ ಪು.೩೪೨ ಸಂ|| ಡಾ. ಕುವೆಂಪು ಎಂ.ಎ.,ಡಿ.ಲಿಟ್.ಮಾಸ್ತಿ ವೆಂಕಟೇಶ ಅಯ್ಯಂಗಾರ್

ನಿನಗೆ ಹಸ್ತಿನ ಪುರದ ರಾಜ್ಯದ।
ಘನತೆಯನು ಮಾಡುವೆನು ಪಾಂಡವ।
ಜನಪ ಕೌರವ ಜನಪ ರೋಲೈಸುವರು ಗದ್ದುಗೆಯ॥
ನಿನಗೆ ಕಿಂಕರವೆರಡು ಸಂತತಿ।
ಯೆನಿಸಲೊಲ್ಲದೆ ನೀನು ದುರಿಯೋ।
ಧನನ ಬಾಯ್ದಂಬುಲಕ್ಕೆ ಕೈಯಾನುವರೆ ಹೇಳೆಂದ[೧]॥

ಅವನು ಚಕ್ರವರ್ತಿಯಾದರೆ ಅವನಿಗುಂಟಾಗುವ ವೈಭವ ವನ್ನು ವಿವರಿಸಿ . . . .

ಶೌರಿಯುದಲಿದಿರಿಲ್ಲ ಕುಲದಲಿ।
ಸೂರಿಯನ ಮಗನೊಡನೆ ಹುಟ್ಟಿದ।
ವೀರಶೈವರು ಪಾಂಡುತನಯರು ನಿನ್ನ ವೈಭವಕೆ॥
ಆರು ಸರಿಯೈ ಕರ್ಣನಡೆ ನಡೆ।
ಧಾರುಣೀಪತಿಯಾಗು ನೀನಿರೆ।
ವೈರವಿತ್ತಂಡಕ್ಕೆ ಬಳಿಕಿಲ್ಲೆಂಡನಸುರಾರಿ[೨]॥

ಇಂತು ಕೃಷ್ಣನು ಭೇದೋಪಾಯವನ್ನು ಹೂಡಿದರೂ ಕರ್ಣನಮನವು ಒಪ್ಪಲಿಲ್ಲ. ಪ್ರತಿಯಾಗಿ ಮನದೊಳಗೆ "ಕುರು ಪತಿಗೆ ಕೇಡಾದುದು ... ತನ್ನ ವಂಶವನರುಹಿ ಕೊಂದನು" ಎಂದು ಹೇಳುವಲ್ಲಿ ಅವನ ಸ್ವಾಮಿನಿಷ್ಠೆಯೂ, ಧರ್ಮ

---

೧. ಮಹಾಭಾರತ ಉದ್ಯೋಗಪರ್ವ ೧೦ನೆಯ ಸಂಧಿ ಪ.೧೨.ಪು.೩೪೨
೨. ,, ,, ಪ. ೧೪. ಪು. ೩೪೨
ಸಂ॥ ಡಾ. ಕುವೆಂಪು ಎಂ.ಎ.,ಡಿ.ಲಿಟ್ ಮಾಸ್ತಿ ವೆಂಕಟೇಶ ಅಯ್ಯಂಗಾರ

ನಿಷ್ಠೆಯೂ ಕಂಡುಬರುವದು. ಕರ್ಣನೀಗ ಉಭಯ ಸಂಕಟದಲ್ಲಿ ಸಿಲುಕಿ.

ಕಾದಿ ಕೊಲುವೊಡೆ ಪಾಂಡುಸುತರು ಸ|
ಹೋದರರು ಕೊಲಲಿಲ್ಲ ಕೊಲ್ಲದೆ |
ಕಾದೆನಾದೊಡೆ ಕೌರವಂಗ ವನಿಯಲಿ ಹೊಗಲಿಲ್ಲ||
ಭೇದಲಿ ಹೊಕ್ಕಿರಿದನೋ ಮಧು |
ಸೂದನನ ಕಟಕಟೆನುತ ಘನ ಚಿಂ |
ತೋದಧಿಯಲದ್ದವೊಲು ಮೌನದೊಳಿದ್ದನಾಕರ್ಣ[೧]||

ತನ್ನ ಹಿತಕ್ಕಿಂತ ಸ್ವಾಮಿಯ ಹಿತವನ್ನೇ ಬಯಸುವ ಕರ್ಣನಲ್ಲಿ ಮಾನವೀಯ ದಯಾದ್ರ ದೃಷ್ಟಿ ಕಂಡು ಬರುವುದು.

ಕೃಷ್ಣನು "ಕುಂತೀಮಕ್ಕಳು ನಿನ್ನ ಸೇವೆಯನ್ನು ಮಾಡುವುದು ನಿನಗೆ ಸೇರದೆ? ನಿನಗೆ ಮರುಳುತನ ಬೇಡ. ನಾನು ನಿನ್ನ ಅಪದೆಸೆಯನ್ನು ಬಗೆಯುವವನಲ್ಲ." ಎಂದು ಅರುಹಿದಾಗ...

ಮರುಳು ಮಾಧವ ಮಹಿಮ ರಾಜ್ಯದ |
ಸಿರಿಗೆ ಸೋಲುವನಲ್ಲ ಕೌಂತೇ|
ಯರು ಸುಯೋಧನರೆನಗೆ ಬೆಸಕೈವಲ್ಲಿ ಮನವಿಲ್ಲ||
ಹೊರೆದ ದಾತಾರಂಗೆ ಹಗೆವರ |
ಶಿರವನರಿ ದೊಪ್ಪಿಸುವೆ ನೆಂಬೀ|
ಭರದೊಳಿರ್ದೆನು ಕೌರವೇಂದ್ರನ ಕೊಂದೆ ನೀನೆಂದ[೨]||

---

೧. ಮಹಾಭಾರತ ಉದ್ಯೋಗ ಪರ್ವ ೧೦ನೆಯ ಸಂಧಿ ಪ.೧೭ ಪು.೩೪೨
೨ ,, ,, ಪ. ೧೪ ಪು. ೩೪೨

ಸಂ|| ಡಾ. ಕುವೆಂಪು ಎಂ.ಎ.,ಡಿ.ಲಿಟ್ ಮಾಸ್ತಿ ವೆಂಕಟೇಶ ಅಯ್ಯಂಗಾರ

ಈ ಭೂಮಂಡಲದ ರಾಜ್ಯ ಸಿರಿಗೆ ಸೋಲುವವನಲ್ಲ ಕೌರವ-ಪಾಂಡವರಿಂದ ಸೇವೆಯನ್ನು ಸ್ವೀಕರಿಸುವಲ್ಲಿ ಮನಸ್ಸಿಲ್ಲ. ನನ್ನನ್ನು ರಕ್ಷಿಸಿದ ಸ್ವಾಮಿಗೆ ವೈರಿಗಳ ಶಿರಗಳನ್ನು ಕತ್ತರಿಸಿ ಒಪ್ಪಿಸುವೆನೆಂಬ ಭರದಲ್ಲಿದ್ದೆ. ನೀನು ಕೌರವೇಂದ್ರನ ಕೊಂದೆ" ಎಂದು ಹೇಳುವ ರವಿಸುತನ ಮಾತಿನಲ್ಲಿ ಧರ್ಮತೇಜವು ಪುಟನೆಗೆದು ಕಾಣುವುದು. ನಂಬಿದವರಿಗೆ ನಂಜನೀಡುವ ಹೀನ ಮನೋವೃತ್ತಿ ಕರ್ಣನದಲ್ಲವೆಂಬ ಮಾತು ಸ್ಪಷ್ಟವಾಗಿ ಕಾಣುವುದು. ಅವನು ಹರಿಗೆ ನಿರ್ಧಾರವನ್ನರುಹುವನು.

ವೀರ ಕೌರವ ರಾಯನೇ ದಾ।
ತಾರನಾತನ ಹಗೆಯೆ ಹಗೆ।.......
ಶೌರಿಯುದ ಸಂಪನ್ನತನವಸು ಪಾಂಡುತನಯರಲಿ[1]॥
ಹಲವು ಮಾತೇನಖಿಳ ಜನಕೆ।
ನ್ನುಳಿವು ಸೊಗಸದು ಕೌರವೇಶ್ವರ।
ನೊಲುಮೆ ತಪ್ಪಿಸಿ ಭುವನ ದೊಳಗೆನಗಾಪ್ತ ಜನವಿಲ್ಲ ॥
ಸಲುಹಿದನು ಮನ್ನಣೆಯಲೆನಗ।
ಗ್ಗಳಿಕೆಯಲ್ಲದೆ ಹೀನವೃತ್ತಿಯ।
ಬಳಸಿ ನಡೆಸನು ಕೌರವೇಂದ್ರನನೆಂತು ಮರೆದಪೆನು॥[2]

'ಕೌರವೇಶ್ವರನ ಹೊರತು ನನಗೆ ಆಪ್ತ ಜನವಿಲ್ಲ' ಎಂದು ಹೇಳುವ ಕರ್ಣನ ಮಾತಿನಲ್ಲಿ ಧರ್ಮಶ್ರೀಯು ಕಾಣುವುದು.

---

೧. ಮಹಾಭಾರತ ಉದ್ಯೋಗ ಪರ್ವ ೧೮ನೆಯ ಸಂಧಿ ಪ.೧೬ ಪು.೩೪೨

೨. ,, ,, ಪ. ೧೭ ಪು.೩೪೨

ಸಂ॥ ಡಾ. ಕುವೆಂಪು ಎಂ.ಎ., ಡಿ.ಲಿಟ್. ಮಾಸ್ತಿ ವೆಂಕಟೇಶ ಅಯ್ಯಂಗಾರ

ಒಂದು ರವಿವಾರ ಕರ್ಣನು ತನ್ನ ತಾತನಾದ ಸೂರ್ಯ ನಿಗೆ ಅರ್ಘ್ಯವನ್ನು ಕೊಡುತ್ತಿರುವಾಗ ಅವನು ಕರ್ಣನನ್ನು ಏಕಾಂತದಲ್ಲಿ ಕರೆದು "ಕೃಷ್ಣನ ಉಪದೇಶದಂತೆ ಕುಂತಿಯು ನಿನ್ನ ಬಾಣಗಳನ್ನು ಬೇಡಲು ಬಂದಿರುವಳು. ಅಂದು ಹರಿಗೆ ಕವಚವನ್ನು ಕೊಟ್ಟ ಹಾಗೆ ನೀನು ಕೊಡ ಬೇಡ" ಎಂದು ಹೇಳುವನು.

ಕುಂತಿದೇವಿಯು ಕರ್ಣನಿದ್ದ ಗಂಗಾನದಿಗೆ ಬರುವಳು. ಅವಳ ಕಣ್ಣಿಂದ ನೀರು ಧಾರಾಕಾರವಾಗಿ ಸುರಿಯುವವು. ಮಗನನ್ನು ತಗೆದು ಬಿಗಿಯಾಗಿ ಅಪ್ಪಿ......

ಮಗನೆ ತಮ್ಮಂದಿರನು ಪಾಲಿಸು।
ವಿಗಡ ತನವನು ಮಾಣು ನೀನೋ।
ಲಗಿಸುವರೆ ಕುರುಪತಿಯು ನಿನಗವರಿದಿರೆಯಿತ್ತಂಡ॥

ಸೊಗಸು ತಾನೆಂದುದನು ಹಿಸುಣರ।
ಬಗೆಯ ನೀಕೇಳದಿರು ನೀಮುನ।
ಬಿಗಿಸದಿರು ಸಲಿಸೆನ್ನ ವಚನವನೆಂದಳು ಕುಂತಿ[೧]॥

ಕುಂತಿಯ ಮಾತಿಗೆ......

ತಾಯಹುದು ತಾ ಬಲ್ಲೆನದು ಸಂ।
ಜಾಯತವು ಪಾಂಡವರು ತಮ್ಮದಿ।
ರೀಯುಭಯ ರಾಯರಲಿ ಪಟ್ಟದ ಹಿರಿಯ ತಾನಹುದು॥

---

೧. ಮಹಾಭಾರತ- ಉದ್ಯೋಗಪರ್ವ ೧೦ನೆಯ ಸಂಧಿ ಪ. ೧೭. ಪು.೩೪೨ ಸಂ॥ ಡಾ.ಕುವೆಂಪು ಎಂ.ಎ.,ಡಿ.ಲಿಟ್ ಮಾಸ್ತಿ ವೆಂಕಟೇಶ ಅಯ್ಯಂಗಾರ

ರಾಯನೆನ್ನನು ನೆಚ್ಚಿ ಹೊರೆದನು।
ಸಾಯಲಳುಕುವೆನೇ ಸುಡೇತರ
ದೀಯಿಳೆಯ ಬಾಳಿಕೆ ಕೃತಘ್ನತೆಗೆಲ್ಲಿ ಗತಿಯೆಂದ[1]॥

"ಮಕ್ಕಳೈದವರಿಗೆ ನಾನು ಹಿರಿಯನು ದಾರುಣಿಯ ಬಯಸುವರೆ, ಮೆಚ್ಚುವರಕ್ಕೆ ಹೇಳೇ ಹೇಸಳೇ ಜಯಲಕ್ಷ್ಮಿ ತನಗೆಂದ."

ಇಂದು ನೀವರುಹಿದ ಬಳಿಕ ರವಿ।
ನಂದನನುಯೆಂದರಿದೆನಲ್ಲ ದೆ।
ಹಿಂದೆ ದುರಿಯೋಧನನದಾವುದ ನೋಡಿ ಸಲಹಿದನು॥
ಬಂದು ಪಾಂಡವರೊಡನೆ ಕೂಡಿದ।
ರಿಂದು ನಗದೇ ಲೋಕವಂತಿರ।
ಲಿಂದು ನಿಮ್ಮಡಿ ಬಂದ ಕಾರ್ಯವ ಬೆಸಸಿ ನೀವೆಂದ[2]॥

ಕರ್ಣನು 'ಸುಡು ಈ ಭೂಮಿಯ ಬಾಳಿಕೆ ಕೃತಘ್ನರಿಗೆ. ಗತಿಯಿಲ್ಲ' ಎಂದು ಹೇಳುವಲ್ಲಿ ಅವನ ಉಚ್ಚ ಸಂಸ್ಕೃತಿ ಧರ್ಮ ನಿಷ್ಠೆಗಳು ಕಂಡುಬರುವವು. ಕೌರವರಾಯನನ್ನು ಬಿಟ್ಟು ಬಂದರೆ 'ಹೇಸಳೆ ಜಯಲಕ್ಷ್ಮಿ'ವೆನ್ನುವ ಕರ್ಣನ ಮಾತಿನಲ್ಲಿ ಸ್ವಾರ್ಥರಹಿತ ಭಾವನೆಯು ತುಂಬಿ ತುಳುಕಾಡು ವುದು. ಆಗ ಕುಂತೀದೇವಿಯು...

---

೧. ಮಹಾಭಾರತ ಉದ್ಯೋಗ ಪರ್ವ ೧೦ನೆಯ ಸಂಧಿ ಪ. ೩೪ ಪು.೩೪೨
,, ,, ಪ. ೩೪ ಪು. ೩೪೪
ಸಂ॥ ಡಾ.ಕುವೆಂಪು ಎಂ.ಎ.,ಡಿ.ಲಿಟ್ ಮಾಸ್ತಿ ವೆಂಕಟೇಶ ಅಯ್ಯಂಗಾರ

"ಆದೊಡೈವರ ಮಕ್ಕಳನು ತಲೆ|
ಗಾಯ್ದು ತೋರೈ ಕಂದ ನಿನಗಿ|
ನ್ನೀ ದುರಾಗ್ರಹವೊಪ್ಪುವುದೆ ಕೌರವನ ಸೇವೆಯಲಿ||
ಹೋದ ಬಾಣವ ಮರಳಿ ತೊಡದಿರು
ಮಾಡು ಕಳೆ ವೈರವನು[೧]"

ಕರ್ಣ—ಹಸಾದವೆಂದನು, ಬೀಳುಕೊಟ್ಟನು, ಬಂದನರ ಮನೆಗೆ.

ಕವಿ ಕುಮಾರ ವ್ಯಾಸನಲ್ಲಿಯೂ ನಾಟಕೀಯತೆಯು ಸುಂದರವಾಗಿ ಪ್ರತಿಪಾದೀತವಾಗಿದೆ. ಸಂದರ್ಭಕ್ಕೆ ತಕ್ಕಂತೆ ಸಂಭಾಷಣೆ, ಪದಗಳ ವಿನ್ಯಾಸ, ಸುಲಭ ಶೈಲಿ ಆದರ್ಶ ವಾಗಿವೆ. ಕರ್ಣನು ತಾಯಿಗೆ ವಚನವನ್ನೀಯುವುದರಿಂದ ತನ್ನ ಜೀವನವು ಕಷ್ಟಕೆ ಗುರಿಯಾಗುವುದೆಂದು ಅರಿತರೂ ಇಂತು ಉದಾತ್ತತೆಯನ್ನು ತೋರುವನು.

ಕುಮಾರವ್ಯಾಸ ಭಾರತದ ಉದ್ದಕ್ಕೂ ನಾಟಕೀಯತೆಯು ಎದ್ದು ಕಾಣುವುದು. ಪ್ರತಿಯೊಂದು ಸಂಧಿಯಲ್ಲಿಯೂ ನಾಟಕೀಯ ಭಾವವು ಲಾಸ್ಯವಾಡುವುದು.

---

೧. ಮಹಾಭಾರತ- ಉದ್ಯೋಗ ಪರ್ವ ೧೦ನೆಯ ಸಂಧಿ ಪ.೩೫ ಪು.೩೪೪ ಸಂ. ಡಾ.ಕುವೆಂಪು ಎಂ.ಎ.,ಡಿ.ಲಿಟ್ ಮಾಸ್ತಿ ವೆಂಕಟೇಶ ಅಯ್ಯಂಗಾರ

## ೫ ಲಕ್ಷ್ಮೀಶನ ಜೈಮಿನಿ ಭಾರತದಲ್ಲಿ ಬರುವ ಸೀತಾ ಪರಿತ್ಯಾಗ

ಲೋಕಾಪವಾದಕ್ಕಾಗಿ ಸೀತಾದೇವಿಯನ್ನು ಶ್ರೀರಾಮನು ತ್ಯಜಿಸಲು ನಿಶ್ಚಯಿಸುವನು. ಅವಳು ಪುನಃ ಅರಣ್ಯವನ್ನು ನೋಡಬೇಕಾಗಿದೆಯೆಂಬ ಬಯಕೆಯನ್ನು ಪತಿಯ ಮುಂದೆ ಅರುಹುವಳು. ತನ್ನ ತಮ್ಮಂದಿರರನ್ನು ಕರೆದು ಅವರೊಡನೆ ಈ ಸಮಾಚಾರವನ್ನು ಚರ್ಚಿಸಲಾಗಿ ಭರತ, ಶತ್ರುಘ್ನರು ಸಿಡಿದೇಳುವರು. ಅಗ್ನಿಸಾಕ್ಷಾತ್‌ವಾಗಿ ಪರೀಕ್ಷಿಸಿದ ಭೂಜಾತೆಯನ್ನು ತೊರೆಯುವದು ವಿವೇಕವಲ್ಲವೆಂದು ವಾದಿಸುವರು. ಕೊನೆಗೆ ತನ್ನ ಆಜ್ಞಾಧಾರಕ ತಮ್ಮನಾದ ಲಕ್ಷಣನನ್ನು ಕರೆದು ಈ ಕಾರ್ಯವನ್ನು ಬೆಸಗೊಳ್ಳಲು, ಅವನು ಉಭಯ ಸಂಕಟದಿಂದ ಒಪ್ಪಿಕೊಳ್ಳುವನು. ಕಟ್ಟಡವಿಗೆ ಸೀತೆಯನ್ನು ಕರೆದುಕೊಂಡು ರಥವನ್ನು ನಡೆಯಿಸುತ್ತ ಬರುವ ಲಕ್ಷ್ಮಣನಿಗೆ—

ಎಲ್ಲಿ ಮುನಿಪೋತ್ತಮರ ಪಾವನದ ವನದೆಡೆಗ|
ಳೆಲ್ಲಿ ಸಿದ್ಧಾಶ್ರಮಂಗಳ ಸ್ಥಳಗ|
ಳೆಲ್ಲಿ ಸುಹವಿಗಳ ಕಂಪೊಗೆದ ಪೊಗೆದಳವಗ್ನಿ ಹೋತ್ರದ
ಕುಟೀರಂಗಳು||
ಎಲ್ಲಿ ಪರಿಚಿತವಾದ ವಾದ ವೇದ ಧ್ವನಿಗ|
ಳೆಲ್ಲಿ ಗೊಯ್ಯದೆ ದಾರು ದಾರುಣದ ಕಟ್ಟಡವಿ|

ಗಿಲ್ಲಿಗೇಕೈ ತಂದೆ ತಂದೆ ಸೌಮಿತ್ರಿ ಹೇಳೆಂದು ಜಾನಕಿ
ಸುಯ್ದಳು[೧]||

ಯಾರೂ ಇಲ್ಲದಿರುವ ಈ ಕಠಿಣವಾದ ಅರಣ್ಯಕ್ಕೆ ಏತಕ್ಕೆ ಕರೆದುಕೊಂಡು ಬಂದಿರುವೆ? ಎಂದು ಲಕ್ಷ್ಮಣನನ್ನು ಸೀತಾದೇವಿಯು ಪ್ರಶ್ನಿಸುವಳು. ಆಕೆಯ ಮಾತಿಗೆ ಪ್ರತ್ಯುತ್ತರವನ್ನೀಯದೆ ತನ್ನ ಅಂತರಂಗದಲ್ಲಿ ಅತಿಯಾಗಿ ನೊಂದ ಲಕ್ಷ್ಮಣನು 'ಸೂರ್ಯವಂಶದ ಚಕ್ರವರ್ತಿಯಾದ ಶ್ರೀರಾಮನ ರಾಣಿಯನ್ನು ಹೇಗೆ ಈ ಕಟ್ಟಡವಿಯಲ್ಲಿ ಬಿಟ್ಟು ಹೋಗಲಿ? ಅಥವಾ ಬಿಟ್ಟು ಹೋಗದಿದ್ದರೆ ಶ್ರೀರಾಮನು ಏನನ್ನುವನೊ?' ಎಂಬ ದುಃಖಾಗ್ನಿಯಲ್ಲಿ ಮುಳುಗಿ, ಅತಿಶಯವಾದ ಶೋಕದಿಂದ ಬೆಂಡಾಗಿ ಅತಿ ಕಠಿಣವಾದ ಕಾರ್ಯವನ್ನು ಹೇಳುವ ರೀತಿಯನ್ನು ತಿಳಿಯದೆ ಮೆಲ್ಲನೆ ಸೀತಾದೇವಿಗೆ......

ದೇವಿ ನಿನಗಿನ್ನಿಗಂ ಪೇಳ್ದುದಿಲ್ಲ ಪವಾದ|
ಮಾವರಿಸೆ ನಿನ್ನನೊಲ್ಲದೆ ಕುಲೋದ್ವಹಂ|
ಸೀವರಿಸಿ ಬಿಟ್ಟು ಕಾಂತಾರಕ್ಕೆ ಕಳುಹಿ ಬಾಯೆಂದೆನಗೆ
ನೇಮಿಸಿದೊಡೆ||
ಆವಿಭುವಿನಾಜ್ಞೆಯನ್ನು ಮಿರಲರಿಯದೆ ಮೆಲ್ಲ|
ನೀ ವಿಪಿನ ಕೊಡಗೊಂಡು ಬಂದೆ ನಿನ್ನೊಯ್ಯೊಯ್ಯ!
ನಾವಲ್ಲಿಗಾದೊಡಂ ಪೋಗೆಂದು ಲಕ್ಷ್ಮಣಂ
ಬಾಷ್ಪಲೋಚನನಾದನು[೨]||

---

೧. ಜೈಮಿನಿ ಭಾರತ ೧೯ನೆಯ ಸಂಧಿ ಪ. ೧೧ ಪು. ೨೪೫
೨. ,, ಪ. ೧೫ ಪು. ೨೪೬

ಸಂ|| ಪಂಡಿತ ಕೆ. ನಂಜುಂಡಶಾಸ್ತ್ರಿ

ಎಂದು ಭಾಷ್ಪ ಪೂರಿತ ಲೋಚನನಾಗಿ ಲಕ್ಷ್ಮಣನು ಹೇಳುತ್ತಿರುವುದು ತನ್ನ ಕಿವಿಗಳಿಗೆ ಬೀಳುವುದರೊಳಗಾಗಿಯೇ ಬಿರುಗಾಳಿಯಿಂದ ಹೊಡೆಯಲ್ಪಟ್ಟು ಮುರಿದು ಕೆಳಕ್ಕೆ ಬೀಳುವ ಗೊನೆಬಿಟ್ಟ ಬಾಳೆಯ ಗಿಡದಂತೆ ಸೀತೆಯು ನಡ-ನಡುಗುತ್ತ ಮೂರ್ಛಿತಳಾಗಿ ನೆಲಕ್ಕೆ ಬಿದ್ದಳು. ಆಗ ಸೌಮಿತ್ರಿಯು...

ಮರುಗಿ ತಣ್ಣೀರ್ದಳಿದು ಪತ್ರದಿಂ ಕೊಡೆವಿಡಿದು।
ಸೆರಗಿಂದ ಬೀಸಿ ರಾಮನ ಸೇವೆ ಸಂದುದೇ ತನಗೆಂದು
ರೋದಿಸಿದನು[೧]॥

ಸೀತೆಯು ಕ್ಷಣಮಾತ್ರದಲ್ಲಿ ಕಣ್ದೆರೆದು, ಅತಿ ದೈನ್ಯದಿಂದ ನಿಟ್ಟುಸುರು ಬಿಡುತ್ತ ಲಕ್ಷ್ಮಣನಿಗೆ...

ಕೊಯ್ಯಲೊಲ್ಲದೆ ಕೊರಳನಿಂತು ಮೆನ್ನಂ ಬಿಡಲ್
ಮಾಡಿದಪರಾಧಮುಂಟೆ॥
ಕಯ್ಯಾರೆ ಖಡ್ಗಮಂ ಕೊಟ್ಟು ತನ್ನರಸಿಯಂ।
ಹೊಯ್ಯೆಂದು ಪೇಳದಡವಿಗೆ ಕಳುಹಿ ಬಾರೆಂದ।
ನಯ್ಯಯ್ಯೊ ರಾಘವಂ ಕಾರುಣ್ಯ ನಿಧಿಯೆಂದಳಲ್ದ
ಳಂಬುಜದಳಾಕ್ಷಿ[೨]॥

ಏಂದು ನಿಡುಸುಯ್ಯುವ ರಘುವರನ ರಾಣಿಯ ಶೋಕವನ್ನು ಕಂಡು ಕಲ್ಲು ಕರಗುವುದುಂಟು.

---

೧ ಜೈಮಿನಿ ಭಾರತವು ೧೯ನೆಯ ಸಂಧಿ ಪ. ೧೬ ಪು. ೨೪೬
೨ ,, ಪ. ೧೭ ಪು. ೨೪೬
ಸಂ॥ ಪಂಡಿತ ಕೆ. ನಂಜುಂಡಶಾಸ್ತ್ರಿ

ಕಡೆಗೆ ಕರುಣಾಳು ರಾಘವನಲ್ಲಿ ತಪ್ಪಿಲ್ಲ।
ಕಡುಪಾತಕಂಗೆಯುದ್ದ ಪೆಣ್ಣಾಗಿ ಜನಿಸಿ ತ।
ನ್ನೊಡಲಂ ಪೊರೆವುದೆನ್ನೊಳಪರಾಧಮುಂಟು ಸಾಕಿಲ್ಲಿರ
ಬೇಡ[೧]॥

ಎಂದು ಹೇಳಿ ಮಾರ್ಗದಲ್ಲಿ ಅವನಿಗೆ ಸುಖವನ್ನು ಕೋರುವ ದಾರಣವಾದ ಸ್ಥಿತಿಯನ್ನು ಕಂಡು ಯಾವನ ಹೃದಯವು ಮಿಡಿಯಲಿಕ್ಕಿಲ್ಲ ?

ಸೀತೆಗೆ ಅಡವಿಯಲ್ಲಿ ಪಕ್ಷಿ ಮೃಗ ಜಂತುಗಳೂ ಉಪಚರಿಸುವವು. ಸೀತಾದೇವಿಯು ಧೂಳಿಡಿದ ಮೈಯನ್ನೂ ವಿಕಾರವಾದ ರೂಪವನ್ನೂ ಲಕ್ಷ್ಯಕ್ಕೆ ತಾರದೆ "ಅಯ್ಯೋ ಜನಕರಾಜನ ವಂಶದಲ್ಲಿ ಹುಟ್ಟಿ, ರಘುವಂಶದ ದಶರಥ ರಾಯನ ಸೊಸೆಯಾಗಿ ಈ ಕಟ್ಟಡವಿಯಲ್ಲಿ ದುಃಖಿಸುವಂತಾಯಿತಲ್ಲಾ! ನಾಚಿಕೆಯನ್ನು ಬಿಟ್ಟಾದರೂ ಆತ್ಮ ಘಾತದಿಂದ ಪ್ರಾಣವನ್ನು ತೊರೆದುಕೊಳ್ಳೋಣವೆಂದರೆ, ಗರ್ಭಿಣಿಯಾಗಿರುವುದರಿಂದ, ಭ್ರೂಣ ಹತ್ಯಾ ದೋಷವು ಸಂಭವಿಸುವುದು. ಏನುಮಾಡಲಿ, ಯಾರಿಗೆ ಹೇಳಲಿ" ಎಂದು ಮೆಲ್ಲ ಮೆಲ್ಲನೆ ಅಡವಿಯಲ್ಲಿ ನಡೆಯುತ್ತ ಮೃದುವಾದ ಪಾದಗಳು ಕಲ್ಲು ಮುಳ್ಳುಗಳಿಗೆ ಸೋಂಕಿ ಹೊಸರಕ್ತವು ಸೋರುತ್ತಿರಲು, ಅಲ್ಲಲ್ಲಿ ಆಯಾಸದಿಂದ ಬಿದ್ದೇಳುತ್ತ ಬರುವ ವೇಳೆಯಲ್ಲಿ

---

೧ ಜೈಮಿನಿ ಭಾರತವು ೧೯ನೆಯ ಸಂಧಿ ಪ. ೧೭ ಪು. ೨೪೯
ಸಂ. ಪಂಡಿತ ಕೆ. ನಂಜುಂಡ ಶಾಸ್ತ್ರಿ

ಯಜ್ಞಾರ್ಥವಾಗಿ ಯೂಪವನ್ನು ಹುಡುಕುತ್ತ ತಪೋಧನನಾದ ವಾಲ್ಮೀಕಿ ಮುನಿವರ್ಯನು. ಕೆಲವು ಶಿಷ್ಯರೊಂದಿಗೆ ಈ ಕಾಡಿಗೆ ನಡೆತಂದು ರೀತಿ ತಪ್ಪಿ ರೋದಿಸುತ್ತಿದ್ದ ಸೀತಾದೇವಿಯನ್ನು ಕಂಡು, ಈ ಭಯಂಕರವಾದ ವನ ಮಧ್ಯದಲ್ಲಿ ಇವಳ್ಯಾರೋ ಏಕಾಕಿಯಾಗಿದ್ದಾಳೆ? ಇದನ್ನು ತಿಳಿದುಕೊಳ್ಳುತ್ತೇನೆಂದು ಸೀತೆಯ ಬಳಿಗೆ ಬಂದು...

ಎಲೆ ತಾಯೆ ನೀನಾವಳೌ ಕಂಡ ಕುರುಪಾಗಿರ್ಪುದು|
ಘೋರತರ ಗಹನಕೋರ್ವಳೆ ಬಂದೆಯೆಂತಕಟ|
ಭೀರು ಹೇಳೌ ಬೆದರಬೇಡ ವಾಲ್ಮೀಕಿ ನಾಂ|
ಭೂರಿ ಶೋಕಾರ್ತರಾಗಿರ್ದರಂ ಕಂಡು ಸುಮ್ಮನೆ
ಪೋಪೆನಲ್ಲೆಂದನು[1]||

ಎಂದು ದಯೆಯಿಂದ ಜಾನಕಿಯನ್ನು ಮಾತನಾಡಿಸಲು ಆಗ ಸೀತೆಗೆ...

ಹರುಷ ಮೊತ್ತರಿಸಿದುದು ಶೋಕ ಮಿಮ್ಮಡಿಸಿದುದು|
...ಲೋಕಾಪವಾದಕಪರಾಧಿಯಲ್ಲದ ತನ್ನನು|
ತರಣಿ ಕುಲಸಂಭವಂ ಬಿಟ್ಟನೆಂದೀ ವನದೊ|
ಳಿರಿಸಿ ಪೋದಂ ಸುಮಿತ್ರಾತ್ಮಜಂ ಜೀವವಂ|
ತೊರೆಯ ವೇಳ್ಪುದೆ ಗರ್ಭವೊಡಲೊಳಿಹುದೇವೆ
ನೆಂದರಗಿದಳ್ಮುನಿ ಪದದೊಳು[2]||

೧ ಜೈಮಿನಿ ಭಾರತವು ೧೯ನಯ ಸಂಧಿ ಪ. ೩೯ ಪು. ೨೫೨
೨ ,, ಪ. ೪೦ ಪು. ,,
ಸಂ|| ಪಂಡಿತ ಕೆ. ನಂಜುಂಡಶಾಸ್ತ್ರಿ

ಎಂದು ದುಃಖವೊತ್ತರಿಸಿ ಮುನಿಪಾದಗಳಿಗೆ ನಮಸ್ಕರಿಸುವಳು.

ವಾಲ್ಮೀಕಿ—ದೇವಿ ಬಿಡು ಶೋಕಮಂ ಪುತ್ರ
ಯುಗಮಂ ಪಡೆವೆ।
ಭಾವಿಸದಿರಿನ್ನು ಸಂದೇಹಮಂ ಜನಕಂಗೆ।
ನಾವನ್ಯರಲ್ಲ ನಮ್ಮಾಶ್ರಮಕೆ ಬಂದು ನೀಂ
ಸುಖದೊಳಿರ್ದೊಡೆ ನಿನ್ನನು ॥
ಆವಾವ ಬಯಕೆಯುಂಟೆಲ್ಲಮಂ ಸಲಿಸಿಯಾ।
ನೋವಿ ಕೊಂಡಿರ್ಪೆನಂಜದಿರೆಂದು ಸಂತೈಸಿ।
ರಾವಣಾರಿಯ ರಾಣಿಯಂ ನಿಜತಪೋವನಕೆ ವಾಲ್ಮೀಕಿ
ಕರೆತಂದನು[1]॥

ವಾಲ್ಮೀಕಿ ಮಹರ್ಷಿಗಳು ಸೀತಾದೇವಿಯನ್ನು ತಮ್ಮ ಆಶ್ರಮಕ್ಕೆ ಕರೆದೊಯ್ಯುವರು. ಲಕ್ಷ್ಮೀಶ ಕವಿಯಲ್ಲಿಯೂ ನಾಟಕೀಯತೆಯು ಲಾಸ್ಯವಾಡುವುದು. ಸೀತಾ ಪರಿತ್ಯಾಗದಲ್ಲಿ ಕಾಣುವಂಥ ನಾಟಕೀಯತೆಯು ಜೈಮಿನಿ ಭಾರತದುದ್ದಕ್ಕೂ ಕಂಡುಬರುವುದು.

---

೧ ಜೈಮಿನಿ ಭಾರತ ೧೯ನೆಯ ಸಂಧಿ ಪ. ೨೫ ಪು ೨೨೬
ಸಂ॥ ಪಂಡಿತ ಕೆ ನಂಜುಂಡಶಾಸ್ತ್ರಿ

## ೬. ಕೊನೆಯ ಮಾತು

ಕನ್ನಡ ಕಾವ್ಯಗಳಲ್ಲಿಯ ನಾಟಕೀಯತೆಯನ್ನು ಕುರಿತು ವಿವೇಚನೆ ಮಾಡುವಾಗ ೧೦ನೆಯ ಶತಮಾನದ ಉದ್ದಾಮ ಕವಿಗಳಾದ ಪಂಪ, ರನ್ನರ ಕೃತಿಗಳಾದ 'ವಿಕ್ರಮಾರ್ಜುನ ವಿಜಯ' ಇಲ್ಲವೆ 'ಪಂಪ ಭಾರತ' 'ಸಾಹಸ ಭೀಮವಿಜಯ' ಇಲ್ಲವೆ 'ಗದಾಯುದ್ಧ'ದಿಂದ ಪ್ರಾರಂಭಿಸಿ 'ಹರಿಶ್ಚಂದ್ರ ಕಾವ್ಯ', 'ಕುಮಾರವ್ಯಾಸ ಭಾರತ' ಮತ್ತು ಲಕ್ಷ್ಮೀಶನ 'ಜೈಮಿನಿ ಭಾರತ'ಗಳನ್ನು ಪರಿಶೀಲಿಸಿದಾಗ ಕನ್ನಡ ಕಾವ್ಯಗಳಲ್ಲಿಯ ನಾಟಕೀಯತೆಯು ಎಂಥ ಉನ್ನತ ಪ್ರತಿಭೆಯಿಂದ ಕೂಡಿರುವುದೆಂಬುದು ಗೊತ್ತಾಗುವುದು.

ಗದಾಯುದ್ಧದ ಕೇಂದ್ರ ವ್ಯಕ್ತಿಯಾದ ದುರ್ಯೋಧನ ಅವನ ಸುತ್ತಲಿನ ಪರಿಸರ, ಸನ್ನಿವೇಶಗಳನ್ನು ವಿವೇಚಿಸುವಾಗ ಮಹಾಕವಿ ರನ್ನನು ತೋರಿದ ನಾಟಕೀಯತೆಯ ಪ್ರಜ್ಞೆಯನ್ನು ಮರೆಯುವಂತಿಲ್ಲ. ಗದಾಯುದ್ಧವನ್ನು ದಿ. ಬಿ. ಎಂ. ಶ್ರೀಯವರು ಕವಿಯ ಮಾತುಗಳಲ್ಲಿಯೇ ನಾಟಕಕ್ಕಿಳಿಸಿರುವರು. ಹರಿಶ್ಚಂದ್ರ ಕಾವ್ಯವನ್ನೂ ಹಾಗೆಯೇ ಸುಲಭದಲ್ಲಿ ಮಾರ್ಪಡಿಸಿದುದನ್ನು ನಾವು ಮರೆಯುವಂತಿಲ್ಲ. ಉತ್ತಮ ನಾಟಕಕ್ಕೆ ಬೇಕಾದ ವಸ್ತು, ಜೀವನ ಸಮಸ್ಯೆಗಳ ಸುಂದರವಾದ ನಿರೂಪಣೆ, ಸಂವಾದಗಳ ಸ್ವಾರಸ್ಯ, ಪಾತ್ರಗಳ

ಮನೋ ವಿಶ್ಲೇಷಣಗಳು ಹರಿಶ್ಚಂದ್ರ ಕಾವ್ಯದಲ್ಲಿ ಮಹಾ ಕವಿ ರಾಘವಾಂಕನಿಂದ ಚೆನ್ನಾಗಿ ಪ್ರತಿಪಾದಿಸಲ್ಪಟ್ಟಿವೆ. ಚಂದ್ರಮತಿಯ ಪ್ರಲಾಪದಲ್ಲಿ ಕರುಣ ರಸದ ಮಹಾಪೂರ ವನ್ನೇ ಕವಿಯು ಹಾಯಿಸಿರುವನು. ವಿಧಿಯ ವಿಕಟ ಅಟ್ಟ ಹಾಸದ ಮುಂದೆ ಮಾನವನು ತಲೆಬಾಗಿಸದೆ ಧೈರ್ಯದಿಂದ ನಡೆದರೆ ಅವನ್ನು ನಿಶ್ಚಿತ ಗುರಿಯನ್ನು ಮುಟ್ಟಿ ಶಾಶ್ವತ ಕೀರ್ತಿಯನ್ನುಪಡೆಯುವನೆಂಬುದಕ್ಕೆ ಹರಿಶ್ಚಂದ್ರ ಕಾವ್ಯವೇ ನಿದರ್ಶನ. ಜೀವನದ ನಿಕೃಷ್ಟಸ್ಥಿತಿಗೆ ಬಂದ ಹರಿಶ್ಚಂದ್ರ, ಚಂದ್ರಮತಿಯರು ಸತ್ಯವನ್ನು ಬಿಡದೆ ಪರಿಪಾಲಿಸಿದುದರಿಂದ ಆ ಚಂದ್ರಾರ್ಕತಾರಂಬರವರೆಗೆ ಅವರ ಕೀರ್ತಿಯು ಅಚ್ಚಳಿ ಯದೆ ಉಳಿದಿದೆ.

ಗದಾಯುದ್ಧವು 'ವೀರರಸ' ಪ್ರಧಾನ ಕಾವ್ಯವಾದರೂ ಕವಿ ಚಕ್ರವರ್ತಿ ರನ್ನನು 'ದುಯೋರ್ಧನನ' ಪ್ರಲಾಪದಲ್ಲಿ ಕರುಣ ರಸದ ಗಂಗೆಯನ್ನೇ ಹರಿಯಿಸಿ, ಅವನ ವಿಷಯವಾಗಿ 'ಅಯ್ಯೋ' ಎನ್ನುವ ಮರುಕವನ್ನುಂಟು ಮಾಡಿರುವನು. ಸಂಜಯನ ಮುಂದೆ ತನ್ನ ತಾಯಿಯಾದ ಗಾಂಧಾರಿಯು 'ಕಂದಾ ನಿಜಾನುಜರೇನಾದರೆಂದು ಬೆಸಗೊಂಡರೆ ಏನೆಂದು ಮರುಮಾತುಗುಡತಿ ಕೊಂದರ್ ಕೌಂತೇಯರೆಂದು ಬಿನ್ನ ವಿಸಲೇ' ಎಂದು ಹೇಳುವಾಗ ಯಾವನ ಹೃದಯವು ಕರಗಿ ದ್ರವಿಸಲಿಕ್ಕಿಲ್ಲ? ಮಹಾಕವಿ ರನ್ನನು ನಾಟ್ಯಪ್ರತಿಭೆಯ ಕಲಾಕುಂಚಿಸಿಂದ ಆಯಾ ಸನ್ನಿವೇಶಗಳಿಗೆ ಸುಂದರ ರೂಪ ಕೊಟ್ಟಿರುವನು.

ಗಂಗೆಗೆಸೆದ ಮಗುವಿನ ಬಳಿಗೆ ತಾಯಿ ಕುಂತಿ ಬಂದು ಅವನನ್ನು ತನ್ನ ಕಡೆಗೆ ಒಲಿಸಿಕೊಳ್ಳಬೇಕೆಂದು ಪ್ರಯತ್ನಿಸಿದರೂ ಹೊರೆದದಾತರನಿಗೆ ಎರಡು ಬಗೆಯದ ಕರ್ಣನ ಸ್ವಾಮಿ ನಿಷ್ಠೆಯನ್ನು ತೋರಿದ ಕವಿ ಕುಮಾರವ್ಯಾಸನು ಧನ್ಯನು. ಕೃಷ್ಣನ ಭೇದೋಪಾಯಗಳಿಗೂ ಬಾಗದ ಕರ್ಣನು ತನ್ನ ಸ್ವಾಮಿಯ ಕಾರ್ಯವನ್ನು ತನ್ನ ಜೀವನಕ್ಕಿಂತಲೂ ಮಿಗಿಲೆಂದು ಭಾವಿಸಿ ತನ್ನ ಅಚಲವಾದ ನಿರ್ಧಾರವನ್ನೇ ಶ್ರೀಹರಿಗಿತ್ತುದುದು. ಅಲ್ಲಿ ಬರುವ ಸಂವಾದ ಸ್ವಾರಸ್ಯ ವರ್ಣಾತೀತವಾಗಿವೆ.

ಪಂಪಭಾರತದಲ್ಲಿಯೂ ನಾಟಕೀಯತೆಗೆ ಕೊರತೆಯಿಲ್ಲ. ಭೀಷ್ಮ ಕರ್ಣರ ಸಂವಾದದಲ್ಲಿ ಸುರಸಿಂಧೂದ್ಭವನ ಮಾತುಗಳಲ್ಲಿ ಅತ್ತ್ಯಸ್ನತಿಯು ಕಂಡುಬರುವುದು. ದ್ರೌಪದಿಯ ಮಾತುಗಳಲ್ಲಿ ಸಿಡಿಲ ಗರ್ಜನೆಯಿದೆ. ಅವಳು ನಿಜವಾದ ವೀರ ಪಾರ್ಥಿವ ಪುತ್ರಿಯೆನ್ನುವಂತೆ ಅವಳ ಪಾತ್ರವನ್ನು ಮಹಾಕವಿ ಪಂಪನು ಚಿತ್ರಿಸಿರುವನು. ಅವನ ಭಾರತದ ತುಂಬೆಲ್ಲ ಇಂಥ ಅನೇಕ ಘಟನೆ ಸನ್ನಿವೇಶಗಳು ನಿರೂಪಿತವಾಗಿರುವವು.

ಲಕ್ಷ್ಮೀಶನ ಜೈಮಿನಿ ಭಾರತದಲ್ಲಿ ಬರುವ 'ಸೀತಾ ಪರಿತ್ಯಾಗ'ದಲ್ಲಿಯೂ ಕರುಣ ರಸವು ಮಡುಗಟ್ಟಿ ನಿಂತಿದೆ. ಲಕ್ಷ್ಮಣನ ಉಭಯ ಸಂಕಟ, ಸೀತೆಯ ದುಃಖ ದಯಾಸಿಂಧು ವಾಲ್ಮೀಕಿ ಮಹರ್ಷಿಯ ಕರುಣೆಗಳು ಹೃದಯಂಗಮವಾಗಿ ಪ್ರತಿಪಾದಿಸಲ್ಪಟ್ಟಿರುವವು.

ಕನ್ನಡ ಸಾಹಿತ್ಯವು ಅಪಾರ ಹಾಗೂ ಅನಂತ ೧೦ನೆಯ ಶತಮಾನದಿಂದ ಹಿಡಿದು ೧೮ನೆಯ ಶತಮಾನದ ವರೆಗೆ ರಚಿಸಲ್ಪಟ್ಟ ಅನೇಕ ಕನ್ನಡ ಕಾವ್ಯಗಳಲ್ಲಿ ನಾಟಕೀಯತೆಯು ಲಾಸ್ಯವಾಡುವುದು. ಅವೆಲ್ಲವುಗಳ ನಾಟಕೀಯತೆಯನ್ನು ಪ್ರತಿಪಾದಿಸುತ್ತ ಹೋದರೆ ಒಂದು ಹೆಬ್ಬೊತ್ತಿಗೆಯನ್ನೇ ಬರೆಯಬಹುದು. ಆದುದರಿಂದ ಹಿತ-ಮಿತವಾದ ಕಾವ್ಯಗಳನ್ನಷ್ಟು ತಗೆದುಕೊಂಡು ನಾನು ಪರಿಶೀಲಿಸಿದುದುಂಟು.

ಇಂದು ನಾಟ್ಯ ಪ್ರಪಂಚವು ಪ್ರಗತಿಯಲ್ಲಿಲ್ಲ. ಇಂಥ ಉದಾತ್ತ ಕವಿಗಳ ಕವಿತ್ವ ಪ್ರಭೆಯಿಂದ ಸ್ಫುರಣ ಹೊಂದಿ ಉದಾತ್ತ ನಾಟಕಗಳನ್ನು ರಚಿಸಿ ಸಾರಸ್ವತ ಪ್ರಪಂಚಕ್ಕೆ ತಮ್ಮ ಅಮರ ಕೊಡುಗೆಯನ್ನು ಕನ್ನಡ ಕವಿಗಳು ನೀಡಲೆಂದು ಹಾರೈಸುವೆ.

ಜಯ ತಾಯಿ ರಾಜ-ರಾಜೇಶ್ವರಿ!

———

# ನೆರವು ಪಡೆದ ಗ್ರಂಥಗಳು

೧. ವಿಕ್ರಮಾರ್ಜುನ ವಿಜಯಂ ಪಂಪಮಹಾಕವಿ
—ಡಾ. ಕುವೆಂಪು ಎಂ. ಎ., ಡಿ. ಲಿಟ್

೨. ಮಹಾಕವಿ ಪಂಪ ಹಾಗೂ ಅವನ ಕೃತಿಗಳು (ಆರು ಉಪನ್ಯಾಸಗಳು)

೩. ಗದಾಯುದ್ಧಂ ಮಹಾಕವಿ ರನ್ನ
—ಎಂ. ಎ. ರಾಮಾನುಜೈಯಂಗಾರ್

೪. ಗದಾಯುದ್ಧ ಸಂಗ್ರಹಂ ಮಹಾಕವಿ ರನ್ನ
—ತೀ. ನಂ. ಶ್ರೀಕಂಠಯ್ಯ ಎಂ. ಎ.

೫. ಮಹಾಕವಿ ರನ್ನ ಹಾಗೂ ಅವನ ಕೃತಿಗಳು (ಆರು ಉಪನ್ಯಾಸಗಳು)

೬. ಹರಿಶ್ಚಂದ್ರ ಕಾವ್ಯಂ ಮಹಾಕವಿ ರಾಘವಾಂಕ
—ಎನ್. ಬಸವಾರಾಧ್ಯ ಎಂ. ಎ. ಪಂಡಿತ ಎಸ್. ಬಸಪ್ಪ

೭. ಹರಿಶ್ಚಂದ್ರ ಕಾವ್ಯ ಸಂಗ್ರಹ ಮಹಾಕವಿ ರಾಘವಾಂಕ
—ಟಿ. ಎಸ್. ವೆಂಕಣ್ಣಯ್ಯ ಎಂ. ಎ.
—ಎ. ಆರ್. ಕೃಷ್ಣಶಾಸ್ತ್ರಿ ಎಂ. ಎ.

೮. ಮಹಾಕವಿ ರಾಘವಾಂಕ
ಲೇ. ಡಾ. ಆರ್. ಸಿ. ಹಿರೇಮಠ ಎಂ. ಎ., ಪಿಎಚ್. ಡಿ

೯. ಕರ್ಣಾಟಕ ಭಾರತ ಕಥಾಮಂಜರಿ (ಮಹಾಭಾರತ) ಕುಮಾರವ್ಯಾಸ
—ಡಾ. ಕುವೆಂಪು ಎಂ. ಎ., ಡಿ. ಲಿಟ್., ಮಾಸ್ತಿ ವೆಂಕಟೇಶ ಅಯ್ಯಂಗಾರ

೧೦. ಜೈಮಿನಿ ಭಾರತ ಲಕ್ಷ್ಮೀಶ

—ಪಂಡಿತ ಕೆ. ನಂಜುಂಡಶಾಸ್ತ್ರಿ

೧೧. ಸಚಿತ್ರ ಜೈಮಿನಿ ಭಾರತ ಕಥಾ ಸಂಗ್ರಹ

—ವೆ. ಪಟ್ಟವರ್ಧನ ಅಶ್ವತ್ಥ ನಾರಾಯಣ ಶಾಸ್ತ್ರಿ

೧೨. ಕನ್ನಡ ಕೈಪಿಡಿ ಸಂಪುಟ-೧

—ಪ್ರ. ಸಂ. ಡಾ. ಕುವೆಂಪು ಎಂ. ಎ., ಡಿ. ಲಿಟ್

೧೩. ಭಾರತೀಯ ಕಾವ್ಯ ಮೀಮಾಂಸೆ

—ತಿ. ನಂ. ಶ್ರೀ

೧೪. ಕನ್ನಡ ಸಾಹಿತ್ಯದಲ್ಲಿ ಹಾಸ್ಯ

—ಡಾ. ಎಂ. ಎಸ್. ಸುಂಕಾಪುರ ಎಂ. ಎ., ಪಿಎಚ್. ಡಿ.

೧೫. ನಾಟ್ಯ ಶಾಸ್ತ್ರ ಭರತಮುನಿ

೧೬. ಸಾಹಿತ್ಯದರ್ಪಣ ಅನುವಾದ

— ಡಾ. ಟಿ. ಜಿ. ಸಿದ್ದಪ್ಪಾರಾಧ್ಯ ಎಂ. ಎ., ಪಿಎಚ್. ಡಿ.

## ಉಪನ್ಯಾಸ ಗ್ರಂಥಮಾಲೆಯ ಇತ್ತೀಚಿನ ಪ್ರಕಟನೆಗಳು

**ಬೆಲೆ : ಪ್ರತಿ ಒಂದಕ್ಕೆ ೨೫ ಪೈಸೆ**

ಮಾನಸಿಕ ರೋಗಗಳು —ಎಂ. ಬಿ. ರೇಣುಕಾರ್ಯ

ಕನ್ನಡದಲ್ಲಿ ಕಾದಂಬರಿ ಸಾಹಿತ್ಯ —ದು. ನಿ. ಬೆಳಗಲಿ

ಗರತಿಯ ಹಾಡುಗಳಲ್ಲಿ ಕೌಟುಂಬಿಕ ಜೀವನ ಚಿತ್ರಣ
— ದೇವೇಂದ್ರಕುಮಾರ ಹಕಾರಿ

ಮಾನವ ಮತ್ತು ಶಾಕಾಹಾರ —ಎ. ಎಸ್. ಧರಣೇಂದ್ರಯ್ಯ

ಕರ್ನಾಟಕದಲ್ಲಿ ರಾಷ್ಟ್ರೀಯತೆಯ ಬೆಳವಣಿಗೆ
—ಎನ್. ಎ. ಪಾಟೀಲ

ಜನಪದ ಸಾಹಿತ್ಯದಲ್ಲಿ ಮಾತೃ ವಾತ್ಸಲ್ಯ
—ಲೀಲಾವತಿ ಬಿ. ತೋರಣಗಟ್ಟಿ

ಜನಪದದಲ್ಲಿ ಮಕ್ಕಳ ಸಾಹಿತ್ಯ
—ಸಂಗಮೇಶ ಎಂ. ಬಿರಾದಾರ

ಪ್ರೇಮಚಂದರ ಸಣ್ಣಕಥೆಗಳು
— ಬಿ. ಎಫ್. ಹಸರಾಣಿ

ಹೈದರಾಬಾದ ಕರ್ನಾಟಕ ಹಾಗೂ ತಾರಾನಾಥರು
—ಎನ್. ಎ. ಪಾಟೀಲ

ಭಾರತೀಯ ಸ್ತ್ರೀಯ ಬದಲಾಗುತ್ತಿರುವ ಸ್ಥಾನಮಾನಗಳು
—ಆರ್. ಡಿ. ಮೊಖಾಶಿ

---

ವ್ಯಾಸಂಗವಿಸ್ತರಣ — ಪ್ರಕಟನ ವಿಭಾಗ
ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ-೩